ಪ್ರಚಾರ ಪುಸ್ತಕ ಮಾಲೆ

235

# ಬಂಧುವರ್ಮ

ಬಿ. ಎಸ್. ಸಣ್ಣಯ್ಯ



ಪ್ರಚಾರ ಪುಸ್ತಕಮಾಲೆ–೨೩೫

# ಬಂಧುವರ್ಮ

ಬಿ. ಎಸ್. ಸಣ್ಣಯ್ಯ, ಎಂ.ಎ.




1983

ಮೊದಲನೆಯ ಮುದ್ರಣ : ೧೯೮೪
೫,೦೦೦ ಪ್ರತಿಗಳು

ಹಕ್ಕುಗಳು ಲೇಕಖರವು

ಬೆಲೆ : ೨೫ ಪೈಸೆ

ಪ್ರಕಾಶಕರು
ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೬

ಮುದ್ರಕರು
ನಿರ್ದೇಶಕರು, ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು-೬

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ "ಸೆನೆಟ್" ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರಿಕೃತವಾಗದೆ ನಾಡಿನ ಮೂಲೆಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಪ್ರಸಾರಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು,

ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವ ವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ ವಿಶಾಲಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರ ಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ

ಮುಂತಾದ ವಿಷಯಗಳನ್ನು ಕುರಿತ ಇನ್ನೂರಮೂವತ್ತೈದು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಬಿ. ಎಸ್. ಸಣ್ಣಯ್ಯ ಅವರ 'ಬಂಧುವರ್ಮ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು

ಕೆ. ಎಸ್. ಹೆಗ್ಡೆ
ಕುಲಪತಿ

# ಅರಿಕೆ

ಬಂಧುವರ್ಮ ಕವಿ ಮತ್ತು ಕೃತಿಗಳ ಬಗೆಗೆ ಪ್ರಸಾರಾಂಗದ ವತಿಯಿಂದ ಒಂದು ಉಪನ್ಯಾಸ ನೀಡುವ ಅವಕಾಶ ಒದಗಿದ್ದಿತು. ಅದನ್ನೇ ಈಗ ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದೆ.

ಜನ ಸಾಮಾನ್ಯ ಕವಿಯಾಗಿ ಆದರ್ಶಗಳಿಗೇ ಅಂಟಿಕೊಂಡಂತೆ ಕಂಡುಬರುವ ಬಂಧುವರ್ಮನ ಬಗೆಗೆ ಸಹೃದಯರು ಕೊಡ ಬೇಕಾದ ಸ್ಥಾನವನ್ನು ಕೊಟ್ಟಿಲ್ಲದಿರುವುದು ವಿಷಾದನೀಯ. ಈ ಕಿರುಹೊತ್ತಗೆಯಿಂದಲಾದರೂ ಕವಿಯ ಗುಣಾತಿಶಯಗಳನ್ನು ತಿಳಿಯಲು ಸಾಧ್ಯವಾದರೆ ಅಷ್ಟಕ್ಕೆ ನಾನು ತೃಪ್ತ.

ಪುಸ್ತಕ ಹೊರಬರಲು ಪೂರ್ಣ ಕಾರಣರಾದ ಪ್ರಸಾರಾಂಗದ ನಿರ್ದೇಶಕರಾದ ಶ್ರೀ ಕೆ. ಟಿ. ವೀರಪ್ಪನವರಿಗೆ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು

ಬಿ. ಎಸ್. ಸಣ್ಣಯ್ಯ

# ಪರಿವಿಡಿ

# ಪೀಠಿಕೆ

ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಕಂಡುಬರುವ ಹುಲುಸಾದ ಬೆಳೆಯೆಂದರೆ ಜೈನಸಾಹಿತ್ಯವಾಗಿದೆ. ಇದನ್ನು ಹಳಗನ್ನಡ ಸಾಹಿತ್ಯ ಅಥವಾ ಚಂಪೂಯುಗವೆಂದು ಕರೆಯುತ್ತಾರೆ. ಇಂತಹ ವಿಶಿಷ್ಟ ಕೊಡುಗೆಯನ್ನು ನೀಡಿದ ಜೈನ ಕವಿಗಳೂ ಶಾಸ್ತ್ರಕಾರರೂ 10–12ನೆಯ ಶತಮಾನದಲ್ಲಿ ಅನೇಕರು ಕಂಡುಬರುತ್ತಾರೆ. ಅವರಲ್ಲಿ ಆದಿಕವಿ ಪಂಪನು ಆದಿಪುರಾಣವೆಂಬ ತೀರ್ಥಂಕರ ಚರಿತೆಯನ್ನೂ, ವಿಕ್ರಮಾರ್ಜುನ ವಿಜಯವೆಂಬ ಲೌಕಿಕ ಕಾವ್ಯವನ್ನೂ ರಚಿಸಿ ಮುಂದೆ ಬಂದ ಹಲವಾರು ಕವಿಗಳಿಗೆ ಮಾರ್ಗದರ್ಶಕನಾದನು. ಪೊನ್ನ ರನ್ನ ಮೊದಲಾದವರೂ ಇದೇ ದಾರಿಯಲ್ಲಿ ನಡೆದು ಯಶೋವಂತರಾದರು. ಮುಂದೆ ನಾಗಚಂದ್ರನು ರಾಮಚಂದ್ರ ಚರಿತ ಪುರಾಣ ಮತ್ತು ಮಲ್ಲಿನಾಥ ಚರಿತೆಗಳನ್ನೂ ಕರ್ಣಪಾರ್ಯ ನೇಮಿಚಂದ್ರರು ನೇಮಿನಾಥ ಪುರಾಣಗಳನ್ನೂ ರಚಿಸಿದರು. ಇದೇ ದಾರಿಯಲ್ಲಿ ಬಂದ ಸು. 1190ರಲ್ಲಿದ್ದ ಬಂಧುವರ್ಮನು ಹರಿವಂಶಾಭ್ಯುದಯ, ಜೀವಸಂಬೋಧನೆ ಮತ್ತು ಸತಿಧರ್ಮಸಾರ ಗ್ರಂಥಗಳನ್ನು ರಚಿಸಿ ಯಶಸ್ಸನ್ನು ಪಡೆದನು. ಈ ಹರಿವಂಶಾಭ್ಯುದಯದ ನಂತರ ರಚಿತವಾದ ನೇಮಿನಾಥ ಪುರಾಣಗಳೆಂದರೆ 1254ರಲ್ಲಿದ್ದ ಮಹಾಬಲನ ನೇಮಿನಾಥಪುರಾಣವೆಂಬ ಚಂಪೂಕಾವ್ಯ ಮತ್ತು 1508ರಲ್ಲಿದ್ದ ಮೂರನೆಯ ಮಂಗರಸನ ನೇಮಿಜಿನೇಶ ಸಂಗತಿಯೆಂಬ ಸಾಂಗತ್ಯ ಕೃತಿಗಳಾಗಿವೆ.

ಹೀಗೆ ನೇಮಿನಾಥನನ್ನು ಕುರಿತು ರಚಿತವಾದ ಐದು ಕೃತಿಗಳಲ್ಲಿ ಕರ್ಣಪಾರ್ಯನದೇ ಮೊದಲನೆಯದಾಗಿದೆ. ಇದಕ್ಕಿಂತ

ಮೊದಲು ಸು. 900ರಲ್ಲಿದ್ದ ಮೊದಲನೆಯ ಗುಣವರ್ಮನು ಹರಿವಂಶವೆಂಬ ಕೃತಿಯನ್ನು ರಚಿಸಿರುವನೆಂದು ತಿಳಿದುಬಂದಿದ್ದರೂ ಅದು ಇದುವರೆಗೂ ಅಲಭ್ಯವಾಗಿಯೇ ಉಳಿದಿದೆ. ಈಗ ದೊರೆತಿರುವ ನೇಮಿನಾಥ ಚರಿತೆಗಳಲ್ಲಿ ಕರ್ಣಪಾರ್ಯನ ಕೃತಿಯೇ ಮೊದಲನೆಯದಾದರೂ ಅನುಪಲಬ್ಧವಾದ ಗುಣವರ್ಮನ ಹರಿವಂಶವನ್ನೂ ಗಣನೆಗೆ ತೆಗೆದುಕೊಂಡರೆ ಗುಣವರ್ಮನದೇ ಮೊದಲನೆಯದಾಗುತ್ತದೆ. ಹರಿವಂಶ ಎಂಬ ಹೆಸರನ್ನು ಹೊತ್ತು ರಚಿತವಾದ ನೇಮಿನಾಥ ಪುರಾಣಗಳಲ್ಲಿ ಬಂಧುವರ್ಮನದು ಎರಡನೆಯದಾಗುತ್ತದೆ. ಆದರೆ ಜೀವಸಂಬೋಧನೆ ಮತ್ತು ಸತಿಧರ್ಮಸಾರಗಳು ಬಂಧುವರ್ಮನ ವಿಶಿಷ್ಟ ಕೊಡುಗೆಗಳಾಗಿದ್ದು ಇಲ್ಲಿ ನಿರೂಪಿತವಾದ ವಿಷಯಗಳಿಗೆ ಇವೇ ಪ್ರಥಮ ಕೃತಿಗಳಾಗಿವೆ.

**ಕವಿ ಕಾಲ ವಿಚಾರ :**

ಬಂಧುವರ್ಮನು ಕ್ರಿ.ಶ.ಸು. 1190ರಲ್ಲಿದ್ದವನು. ಈತನು ಹರಿವಂಶಾಭ್ಯುದಯ ಮತ್ತು ಜೀವಸಂಬೋಧನೆ ಎಂಬ ಎರಡು ಕೃತಿಗಳನ್ನು ರಚಿಸಿದಂತೆ ಇದುವರೆಗೆ ತಿಳಿದುಬಂದಿದ್ದಿತು. ಆದರೆ ಇತ್ತೀಚೆಗೆ ನಮಗೆ ದೊರೆತ ಸತಿಧರ್ಮಸಾರದಿಂದ ಈತನು ಮೂರು ಕೃತಿಗಳ ಕರ್ತೃವಾಗಿರುವುದು ಕಂಡುಬರುತ್ತದೆ. ಮೊದಲನೆಯದು 22ನೆಯ ತೀರ್ಥಂಕರನಾದ ನೇಮಿನಾಥನ ಕಥೆಯನ್ನೊಳಗೊಂಡುದಾದರೆ, ಎರಡನೆಯದು ಜೈನತತ್ತ್ವದ ಹನ್ನೆರಡು ಅನುಪ್ರೇಕ್ಷೆಗಳ ನಿರೂಪಣೆಯಿಂದ ಕೂಡಿದುದಾಗಿದೆ. ಮೂರನೆಯದು ಶ್ರಾವಕಿಯರ ನಡೆನುಡಿಗಳ, ಆಚಾರ ವಿಚಾರಗಳ ಮಾರ್ಗದರ್ಶನವಾಗಿದೆ. ಮೊದಲೆರಡು ಚಂಪೂಕೃತಿಗಳಾ

ಗಿದ್ದು ಮೂರನೆಯದು ಕಂದಪದ್ಯಗಳಿಂದ ಕೂಡಿದೆ.

ಹರಿವಂಶಾಭ್ಯುದಯದಲ್ಲಿ

ಕಾಮಕಳಾ ನಿತಂಬಿನಿಯೆ ಪಾದಪಯೋಧರಯುಗ್ಮೆ
ನಾಟ್ಯವಿ
ದ್ಯಾಮುಖಿ ರಾಜನೀತಿಪದ ಲಕ್ಷಣಲೋಚನೆ
ಸಾರಹಸ್ತೆಧ
ರ್ಮಾಮೃತವಾಕ್ಯೆ ಕಾವ್ಯರಸಭಾವೆ ಸರಸ್ವತಿ ಬಂಧು
ವರ್ಮವ
ಕ್ತ್ರಾಮಳ ಕೋಮಳಾಂಬುರುಹದೊಳ್ ನೆಲಸಿರ್ಕೆ
ಮನೋನುರಾಗದಿಂ ೧-೮

ಎಂದು ಸರಸ್ವತೀದೇವಿಯನ್ನು ಸ್ತುತಿಸುತ್ತಾ ತನ್ನ ಹೆಸರನ್ನು ಹೇಳಿಕೊಳ್ಳುತ್ತಾನೆ. ಹಾಗೆಯೇ ಜೀವಸಂಬೋಧನೆಯಲ್ಲಿ

ಅನುಪಮಕಾವ್ಯಧರ್ಮದಱಿವಿಲ್ಲದನಂ ಜಡನೆಂದು ಪಾಪಕ
ರ್ಮನ ದೆಸೆಯೊಲ್ಲೆನೆಂದು ಪುಸಿವಾತನನೇಱಿದನೆಂದು
ಕಾವ್ಯಚೋ
ರನನುಜದೇವನೆಂದು ಮನಸಂದು ಸರಸ್ವತಿ ಬಂದು
ಬಂಧುವ
ರ್ಮನ ಮುಖಪದ್ಮದೊಳ್ ನೆಲಸಿ ನಿಂದು ವಿರಾಜಿಸು
ತಿರ್ಕೆ ರಾಗದಿಂ ೧-೬

ಎಂದು ತನ್ನ ಹೆಸರನ್ನು ಸೂಚಿಸಿದ ಕವಿಯು ಕಾವ್ಯದ ಕೊನೆಯಲ್ಲಿ

ನುತ ವೈಶ್ಯೋತ್ತಮ ಬಂಧುವರ್ಮ ರಚಿತಂ ಶ್ರೀಜೀವ
ಸಂಬೋಧನೋ

ನ್ನತನಾವು ಪ್ರವಿರಾಜಿತಂ ನೆಗಟ್ದನು ಪ್ರೆಕ್ಷಾಧಿಕಾ
ರಾಭ್ಯುಪಾ
ಶ್ರಿತಮಂ ಭಾವಿಸೆ ಬೋಧಿಸಲ್ಕುಮದಱಿಂದಪ್ಪಾಘ
ಸಂಬಂಧನ
ಕ್ಷತಿಯಂ ನೆಟ್ಟನೆ ಮಾಡಿ ಗೆಲ್ದು ಪಡೆವರ್ ಸಂಶುದ್ಧಿಯಂ
ಸಿದ್ಧಿಯಂ ೧೨-೬೪

ಎಂದು ಹೇಳಿ ತಾನು ವೈಶ್ಯನೆಂಬುದನ್ನು ಸೂಚಿಸಿದ್ದಾನೆ. ಇದಲ್ಲದೆ ಹರಿವಂಶಾಭ್ಯುದಯದ ಪ್ರತಿ ಆಶ್ವಾಸದ, ಜೀವಸಂ.ಯ ಪ್ರತಿ ಅಧಿಕಾರದ ಕೊನೆಯಲ್ಲಿಯೂ ಬಂಧುವರ್ಮನ ಹೆಸರು ಬರುತ್ತದೆ.

ಮೂರನೆಯ ಕೃತಿಯಾದ ಸತಿಧರ್ಮಸಾರದಲ್ಲಿ ಕಾವ್ಯದ ಮೊದಲು ಈತನ ಹೆಸರು ಕಂಡುಬರುವುದಿಲ್ಲ. ಕೊನೆಯಲ್ಲಿ

ಎನಿತನುಪ್ರೆಕ್ಷೆಯವೆಲ್ಲವು
ನನುವಾಗಿಯೆ ಪೇಟ್ದ ಬಂಧುವರ್ಮ ಕವೀಂದ್ರಂ
ಮನವೊಲಿದು ಕೇಳ್ವುದೆಲ್ಲರ್
ಘನಸಾರ ಸುಬೋಧೆ ಜೀವಸಂಬೋಧನೆಯಂ ೧೯೦

ಎಂದು ಹೇಳಿರುವುದರಿಂದ ಈ ಕೃತಿಯನ್ನು ಜೀವಸಂಬೋಧನೆ ಯೆಂದು ಕರೆದಿದ್ದಾನೆಂದು ಕಂಡುಬರುತ್ತದೆ. ಆದರೆ ಮೊದಲಲ್ಲಿ "ಹಿತವಹ ಸತಿಧರ್ಮಸಾರವಂ ವಿರಚಿಸುವೆಂ" (೮) ಎಂದು ಹೇಳುವುದರಿಂದ ಹಾಗೂ ಜೀವಸಂಬೋಧನೆಯೆಂಬ ಮತ್ತೊಂದು ಗ್ರಂಥವಿರುವುದರಿಂದ ಇದನ್ನು ಸತಿಧರ್ಮಸಾರವೆಂದೇ ಕರೆಯು ವುದು ಉಚಿತವಾಗಿದೆ. ಮೇಲಾಗಿ ಇದರಲ್ಲಿ ಹೇಳಿರುವ ಅಂಶ ಗಳು ಎಲ್ಲ ಜೀವಗಳನ್ನು ಕುರಿತದ್ದಾಗಿರದೆ ಸತಿಯರಿಗೆ ಮಾತ್ರ ನಿರ್ದೇಶಿತವಾಗಿದೆ.

ಆದರೆ ಈ ಕೃತಿಯನ್ನು ರಚಿಸಿದಾತ ಬಂಧುವರ್ಮ ಎಂಬುದು ಸ್ಪಷ್ಟವಾಗಿ ಕೃತಿಯಲ್ಲಿಲ್ಲದಿರುವುದರಿಂದ, ಇರುವೆಡೆಯಲ್ಲಿ ಜೀವಸಂಬೋಧನೆಯ ಹೆಸರು ಬರುವುದರಿಂದ ಈ ಕೃತಿ ಈತನದೇ ಎಂಬ ಬಗೆಗೆ ಸಂಶಯ ಮೂಡುವುದು ಸಹಜವಾಗಿದೆ. ಈಗಾಗಲೆ ಜೀವಸಂಬೋಧನೆಯನ್ನು ರಚಿಸಿದ್ದಂತಹ ಈತನು ಜೀವಸಂಬೋಧನೆಯಲ್ಲಿ ಅನುಪ್ರೇಕ್ಷೆಗಳನ್ನು ಹೇಳಿದ್ದೇನೆ ಎಂಬುದನ್ನು ಸತಿಧರ್ಮಸಾರದ ಕೊನೆಯಲ್ಲಿ ಸೂಚಿಸಿರಬಹುದು. ಈ ಕೃತಿಯ ಆದಿಯ ಪದ್ಯಗಳು ಉಳಿದ ಎರಡು ಕೃತಿಯ ರೀತಿಯಲ್ಲಿಯೇ ಬರುವುದರಿಂದ ಹಾಗೂ ಕೊನೆಯಲ್ಲಿ ಬಂಧುವರ್ಮನ ಹೆಸರು ಕಂಡುಬರುವುದರಿಂದ ಇದೂ ಬಂಧುವರ್ಮನದೇ ಎಂದು ನಿರ್ಣಯಿಸಲಾಗಿದೆ.

ಈ ಮೂರೂ ಕೃತಿಗಳ ರಚಕನಾದ ಬಂಧುವರ್ಮನು ಯಾವ ಕಾಲದಲ್ಲಿದ್ದವನೆಂಬುದಕ್ಕೆ ಈತನ ಕೃತಿಗಳಲ್ಲಿ ಯಾವ ಸ್ಪಷ್ಟವಾದ ನಿದರ್ಶನಗಳೂ ದೊರೆಯುವುದಿಲ್ಲ. ಈತನು ತನ್ನ ಹಿಂದಣ ಯಾವ ಕವಿಗಳನ್ನಾಗಲಿ ಸ್ತುತಿಸದಿರುವುದರಿಂದ ಯಾವ ಕವಿಯ ಅನಂತರ ಇದ್ದನೆಂಬುದನ್ನು ಹೇಳಲು ಸಾಧ್ಯವಾಗುವುದಿಲ್ಲ. ಈತನ ಅನಂತರ ಬಂದ ಕವಿಗಳಲ್ಲಿ ಬಂಧುವರ್ಮನನ್ನು ಸ್ತುತಿಸುವ ಮೊದಲಿಗನೆಂದರೆ ಸು. 1190ರಲ್ಲಿದ್ದ ಬ್ರಹ್ಮಶಿವ.

ಇವನು ಸಮಯ ಪರೀಕ್ಷೆಯಲ್ಲಿ

ನಯದಿಂದಂ ತಾಯುಂ ತಂ
ದೆಯುಮೊಳ್ಪನೆ ಶಿಕ್ಷಿಪಂತೆ ಮನುಜಾವಳಿಯಂ
ನಯದಿಂ ಸಂಬೋಧಿಸಿ ಮು
ಕ್ತಿಯೊಳೊಂದಿದ ಪೆರ್ಮೆ ಬಂಧುವರ್ಮಂಗೆ ನಿಜಂ

ರೋಗಂ ಸಮಸ್ತ ದುಃಖ
ಕ್ಕಾಗರಮದು ಕೇಳ ಜೀವಸಂಬೋಧನೆಯಿಂ
ಜೇಗಂ ಮಾಣ್ಗುಂ ದುಸ್ಸಹ
ರೋಗಂ ಸದ್ವೈದ್ಯಸಿಂದಮುಪಶಮಿಸುವವೋಲ್

ಭವಜಲಧಿಯೊಳಗೆ ಮುಳ್ಗಾ
ಡುವ ಜೀವಾವಳಿಗೆ ಮುಕ್ತಿಯಿಂ ತಡೆಯದೆ ಪೊ
ರ್ದುವುದಂ ಪೇಳ್ದ ದಜ್ಞಿಂ ಬಂ
ಧುವರ್ಮನಂ ಭುವನಬಂಧುವೆನ್ನದರೊಳರೇ ೧-೨೯-೩೧

ಎಂದು ಸ್ತುತಿಸುತ್ತಾನೆ. ಸು. 1235ರಲ್ಲಿದ್ದ ಕಮಲಭವನು ಶಾಂತೀಶ್ವರ ಪುರಾಣದಲ್ಲಿ ಪಂಪ ಪೊನ್ನ ನಾಗಚಂದ್ರ ರನ್ನ ನೇಮಿಚಂದ್ರ ಮತ್ತು ಜನ್ನರ ಸರಿಸಮನಾಗಿ ಬಂಧುವರ್ಮನನ್ನು ಕಂಡಿದ್ದಾನೆ. 1331ರಲ್ಲಿದ್ದ ನಾಗರಾಜನು ತನ್ನ ಪುಣ್ಯಾಸ್ರವದಲ್ಲಿ

ಕವಿಗಳೊಳೆ ಬಂಧುವರ್ಮಂ
ಕವಿಯಿರ್ವರ್ಗಳ ಮುಂದೆ ಕವಿಗಳೆಂಬವರೆಲ್ಲಂ
ಛವಿಗೆಟ್ಟಿರ್ಪರ್ ತೊಳಗುವ
ರವಿಯಿಂ ಬಳಸಿರ್ದ ಬಹಳ ಭಗಣಂಗಳವೋಲ್ ೧-೬೨

ಎಂದು ಹೊಗಳಿದ್ದಾನೆ. ಬಂಧುವರ್ಮನ ಕಾವ್ಯಗಳನ್ನು ಓದಿದ ಯಾರಿಗಾದರೂ ಈ ಮಾತು ಸರಿಯೆಂದು ತೋರುತ್ತದೆ. 1508ರಲ್ಲಿದ್ದ ಮಂಗರಸನು ಬಂಧುವರ್ಮನನ್ನು ಸ್ತುತಿಸುತ್ತಾನೆ.

ಮೇಲೆ ನೋಡಿದಂತೆ ಸು. 1190ರಲ್ಲಿದ್ದ ಬ್ರಹ್ಮಶಿವನು ಬಂಧುವರ್ಮನನ್ನು ಸ್ತುತಿಸುವುದರಿಂದ ಬಂಧುವರ್ಮನು ಈತನಿ

ಗಿಂತ ಮೊದಲೊ ಅಥವಾ ಸಮಕಾಲೀನನೊ ಆಗಿರಬೇಕಾಗು ತ್ತದೆ. ಸು 1235ರಲ್ಲಿದ್ದ ಕಮಲಭವನು 'ಸಂದ ಬಂಧುವರ್ಮ' ಎಂದು ಹೇಳಿರುವುದರಿಂದ ಬಂಧುವರ್ಮನು ಈತನಿಗಿಂತ ಮೊದ ಲಿದ್ದವನು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಎಷ್ಟು ಹಿಂದಿ ನವನು ಎಂಬುದಕ್ಕೆ ಯಾವ ಆಧಾರಗಳೂ ದೊರೆಯುವುದಿಲ್ಲ. ಸು. 1140ರಲ್ಲಿದ್ದ ಕರ್ಣಪಾರ್ಯನ ನೇಮಿನಾಥ ಪುರಾಣವನ್ನು ಬಂಧುವರ್ಮನು ಅನುಸರಿಸಿರುವುದನ್ನು ಹರಿವಂಶಾಭ್ಯುದಯದಲ್ಲಿ ಗುರುತಿಸಬಹುದಾದುದರಿಂದ ಕರ್ಣಪಾರ್ಯನಿಗಿಂತ ಈಚೆಗಿದ್ದ ವನು ಎಂದು ಹೇಳಬೇಕಾಗುತ್ತದೆ. ಕರ್ಣಪಾರ್ಯನೇ ಬಂಧು ವರ್ಮನನ್ನೇಕೆ ಅನುಸರಿಸಿರಬಾರದೆಂದು ಯಾರಾದರೂ ಕೇಳ ಬಹುದು. ಅದಕ್ಕೂ ಅವಕಾಶವಿದೆ. ಈ ವಾದ ವಿವಾದಗಳಿಗೆ ಸ್ಪಷ್ಟ ಆಧಾರಗಳಾವುವೂ ದೊರೆಯುವುದಿಲ್ಲವಾದುದರಿಂದ ಸದ್ಯಕ್ಕೆ ಬಂಧುವರ್ಮನು 1140ರಿಂದ 1190ರ ಒಳಗಿದ್ದವನೆಂದು ಹೇಳ ಬಹುದಾಗಿದೆ. ಎಂದರೆ ಈಗಾಗಲೆ ನಿರ್ಣಯವಾಗಿರುವ ಸು. 1200ಕ್ಕೆ ಬದಲಾಗಿ ಸು. 1190 ಎಂದು ನಿರ್ಣಯಿಸಬಹು ದಾಗಿದೆ.

## ವ್ಯಕ್ತಿತ್ವ

ಕವಿಗಳು ತಮ್ಮ ಕಾವ್ಯಪ್ರಾರಂಭದಲ್ಲಿ ದೈವವನ್ನೂ ಗುರು ಗಳನ್ನೂ ಸ್ತುತಿಸುವಂತೆಯೇ ಜೈನನಾದ ಈ ಬಂಧುವರ್ಮನು ಕ್ರಮವಾಗಿ ಜಿನರು, ಸಿದ್ಧರು, ಆಚಾರ್ಯರು, ಉಪದೇಶಕರು, ಸಾಧುಗಳು, ಯಕ್ಷ ಯಕ್ಷಿಯರು ಮತ್ತು ಸರಸ್ವತಿಯನ್ನು ಹರಿ ವಂಶಾಭ್ಯುದಯದಲ್ಲಿ ಸ್ತುತಿಸಿದರೆ, ಜೀವಸಂಬೋಧನೆಯಲ್ಲಿ ಯಕ್ಷಯಕ್ಷಿಯರನ್ನು ಬಿಟ್ಟು ಉಳಿದೆಲ್ಲರನ್ನೂ ಹೊಗಳಿದ್ದಾನೆ.

ಹಾಗೆಯೆ ಸತಿಧರ್ಮಸಾರದಲ್ಲಿ ಜಿನರು, ಸಿದ್ಧರು, ಸೂರಿಗಳು, ದೇಶಕರು, ಸಾಧುಗಳು ಮತ್ತು ಸರಸ್ವತಿಯನ್ನು ಪ್ರಾರ್ಥಿಸಿದ್ದಾನೆ.

ಇದಾದನಂತರ ತಮ್ಮ ಪೂರ್ವದ ಸಂಸ್ಕೃತ ಕನ್ನಡ ಕವಿಗಳನ್ನು ನೆನೆಯುವುದು ಕನ್ನಡ ಕವಿಗಳ ಸಾಮಾನ್ಯ ರೀತಿಯಾಗಿದೆ. ಆದರೆ ಬಂಧುವರ್ಮ ಇದಕ್ಕೆ ಹೊರತಾಗಿ ನಿಲ್ಲುತ್ತಾನೆ. ಪಂಪ ಪೊನ್ನ ರನ್ನ–ಮೊದಲಾದ ಯಾವ ಹಿಂದಣ ಕವಿಗಳೂ ಈತನ ಲಕ್ಷ್ಯಕ್ಕೆ ಬಾರದಾಗುತ್ತಾರೆ. ತಾನು ಶ್ರೇಷ್ಠ ಕವಿಯೆಂಬ ಹೆಗ್ಗಳಿಕೆಯನ್ನು ಹೊಂದಿದ್ದವನು ಈತ ಎಂಬುದು ಈತನ ಮಾತುಗಳಿಂದಲೇ ವಿದಿತವಾಗುತ್ತದೆ.

ಬಂಧುವರ್ಮನು ಜೀವಸಂಬೋಧನೆಯಲ್ಲಿ "ಅನುಪಮ ಕಾವ್ಯದಱಿವಿಲ್ಲದನಂ" (೧–೬) ಎಂಬ ಪದ್ಯದಲ್ಲಿ ಹೇಳುವಂತೆ ತಾನು ಹಿರಿಯ ಕವಿಯೆಂದೂ, ಕಾವ್ಯಧರ್ಮವನ್ನು ಅರಿತವನೆಂದೂ, ಎಂದೂ ಸತ್ಯವನ್ನೇ ನುಡಿಯುವವನೆಂದೂ, ಪರರ ಕಾವ್ಯಗಳಿಂದ ಕದ್ದು ತಾನು ಕಾವ್ಯರಚನೆ ಮಾಡುವವನಲ್ಲವೆಂದೂ ಸ್ಪಷ್ಟವಾಗಿ ಸಾರುತ್ತಾನೆ. ಈ ಎಲ್ಲ ಗುಣಗಳನ್ನು ಹೊಂದದವರನ್ನು ಬಿಸುಟು, ಈ ಎಲ್ಲವನ್ನೂ ಪಡೆದಿರುವ ತನ್ನ ಮುಖಪದ್ಮದಲ್ಲಿ ಸರಸ್ವತಿಯು ಪ್ರೀತಿಯಿಂದ ನೆಲಸಿ ವಿರಾಜಿಸುತ್ತಾಳೆ. ಈ ವಿರಾಜಮಾನತೆಯ ಕುರುಹಾಗಿಯೇ ಈ ಕಾವ್ಯ ರೂಪುಗೊಂಡಿದೆ ಎಂಬುದು ಕವಿಯ ಆಶಯವಾಗಿದೆ.

ಹರಿವಂಶಾಭ್ಯುದಯದ ಮೊದಲಲ್ಲಿ 'ಕಾವ್ಯಲಕ್ಷಣದೊಳಳವಟ್ಟಿರೆ ಪೇೞ್ವುದಲ್ಲದೇಕಾರಣವಯ್ಯ ಕಬ್ಬವ ಬಿಟ್ಟವೇೞ್ವುದೇ' (೧–೧೦), 'ವಿರಸಮಪ್ಪ ಕಬ್ಬಂಬೇೞ್ದಾಲೋಲತೆಯಿಂದಂ ಬರೆಬರೆದೋಲೆಗಳಂ ಕಿಡಿಸುವಂತು ತಾಟಿಸೊಳು ಪಗೆಯೇ'

(೧೦-೧೧) 'ಸೊಪ್ಪುವಟ್ಟ ಬಗೆಯಿಂದಲ್‌ಗನ್ನಡಗಬ್ಬದೊಳ್ ತಗುಳ್ಚುವ ಬೆಸನೇಕೆ ಮಟ್ಟಮಿರಲಾಗದೆ' (೧-೧೨) ಮೊದಲಾದ ಮಾತುಗಳಿಂದ ಕುಕವಿಗಳನ್ನು ತೆಗಳುತ್ತಾನೆ. ಮುಂದೆ

ರಸದೊಳ್ ಬಿನ್ನಣದೊಳ್ಪು ಕೂಡೆ ಪದಮರ್ಥವ್ಯಕ್ತಿಯಂ
ಮಾಡೆ ರಂ
ಜಿಸಿ ಪತ್ತಿರ್ದೆಣೆಮಾತು ಬಲ್ಲರಿರ್ದೆದಾಳ್ದಂತುಂ ಜನಂ ನಾಡೆ ಬೆ
ಕ್ಕಸಮಪ್ಪಂತುಮಿದೊಂದೆ ಸಾಲ್ವುದು ಜಗಕ್ಕೆಂಬಂತುಮಿಂ
ಪೇಟ್ವೆನೆಂ
ದುಸುರಲ್ ಕಬ್ಬಿಗರಣ್ಮದಂತುಮಿದನಾಂ ಪೇಟ್ವೆಂ ಮಹಾ
ಕಾವ್ಯಮಂ ೧-೧೬

ಎಂದು ತನ್ನ ಕಾವ್ಯರಚನೆಯ ಬಗೆಗೆ ಹೇಳುವ ಈತನ ನುಡಿ ಅತಿಶಯೋಕ್ತಿಯೆಂದೆನಿಸಿದರೂ, ಈತನ ಕೃತಿಗಳನ್ನು ಅಭ್ಯಾಸ ಮಾಡಿದವರಿಗೆ ಈ ಮಾತಿನ ಸಾರ್ಥಕತೆ ಅರಿವಾಗುತ್ತದೆ.

ಬಂಧುವರ್ಮ ಭಾವಜೀವಿ ಹೇಗೋ ಹಾಗೆಯೇ ಭವ್ಯ ಜೀವಿಯೂ ಅಹುದು. ಈತನ ಮನಸ್ಸು ಸಂಸಾರದ ಅಸಾರತೆಯನ್ನು ಅರಿತಿದೆ; ಧರ್ಮಮಾರ್ಗದಿಂದ ಮುಕ್ತವಾಗುವ ಮಾರ್ಗವನ್ನು ಅರಸಿದೆ. ಈ ವ್ಯಕ್ತಿತ್ವ ಚಾರುದತ್ತನ ನಿರೂಪಣೆಯಲ್ಲಿ ಹೊರಹೊಮ್ಮಿದೆ. ಹರಿವಂಶದಲ್ಲಿ ನದಿಯ ಸಮೀಪಕ್ಕೆ ತೆರಳಿದ ಚಾರುದತ್ತನು "ನದಿಯ ತಡಿವಿಡಿದು ಬಂದು ನಾನಾವಿಧಮಪ್ಪ ಪುಷ್ಪರಾಶಿಯಂ ಕೊಯ್ದು ತಮ್ಮಯ್ಯನಲ್ಲಿಗಟ್ಟಿಯಾ ತೋಟಿಯಂ ಮೆಚ್ಚಿ ನೋಡುತ್ತಂ" (೩-೭೮)

ಸ್ವಾಂತರತಿಪಥಿಕ ಪಥವಿ
ಶ್ರಾಂತರುಮಂ ನೋಡೆ ನಾಡೆ ರಯ್ಯಮಿದಂ ನಾ

ನೆಂತು ಗಳ ಬಿಸುಟು ನಗರಾ
ಭ್ಯಂತರದೊಳ್ ಕಟ್ಟಿಕೊಳ್ವ ಕಣಿಯೇನು ಗಡಿಂ ೩-೮

"ಆ ಪುರದೊಳ್ ಚಿಂತಾಮಣಿಯುಳ್ಳೆಡಂ ಕಲ್ಪವೃಕ್ಷವುಳ್ಳೆಡಂ ತನಗಿಷ್ಟವಿಲ್ಲ" ಎಂದು ಹೇಳುವ ಚಾರುದತ್ತನ ಮಾತುಗಳು ಬಂಧುವರ್ಮನ ಮನೋಧರ್ಮವನ್ನು ಹೊರಗೆಡಹುತ್ತವೆ. ಪ್ರಕೃತಿಯಲ್ಲಿ ಆತನಿಗಿರುವ ಆಸಕ್ತಿ ನಗರಜೀವನದಲ್ಲಿ ಕಂಡುಬರುವ ಜಿಗುಪ್ಸೆ ಇಲ್ಲಿ ರೂಪುಗೊಂಡಿದೆ. ಇದು ಬಂಧುವರ್ಮನಲ್ಲಿದ್ದ ಸಂಸಾರದ ಅಸಾರತೆಯನ್ನು ಸೂಚಿಸುತ್ತದೆ. ಧರ್ಮದಲ್ಲಿ ನೆಲೆಗೊಂಡ ಈತನ ಮನಸ್ಸನ್ನು ದ್ವಾದಶಾನುಪ್ರೇಕ್ಷಾ ನಿರೂಪಣೆಯನ್ನೊಳಗೊಂಡ ಜೀವಸಂಬೋಧನೆಯಲ್ಲಿ ನಿಚ್ಚಳವಾಗಿ ಕಾಣುತ್ತೇವೆ. ಇದರಲ್ಲಿ ಜೈನಪ್ರಕ್ರಿಯೆಗಳಾವುವೂ ಹೆಚ್ಚಾಗಿ ಕಂಡುಬರುವುದಿಲ್ಲ, ಕಾಣುವುದು ಕೇವಲ ಮಾನವ ಧರ್ಮ. ಹಾಗೆಯೆ ಗೃಹಸ್ಥಧರ್ಮದಲ್ಲಿ ನಿರ್ಮಲತೆಯನ್ನೂ ಸರಳತೆಯನ್ನೂ ಬಯಸುವ ಬಂಧುವರ್ಮನು ಗೃಹಿಣಿಯರಿಗೆ ನೀತಿನಿರೂಪಣೆಗಳ ಒಂದು ಚಿಕ್ಕ ನೀತಿಸಾರವನ್ನೇ ಸತಿಧರ್ಮಸಾರದಲ್ಲಿ ಕಂಡರಸಿದ್ದಾನೆ. ಇದರಲ್ಲಿ ಜೈನ ಮಹಿಳೆಯರಿಗೆ ಮೀಸಲಾಗಿರುವ ನಾಲ್ಕಾರು ಪದ್ಯಗಳನ್ನು ಬಿಟ್ಟರೆ ಉಳಿದುವೆಲ್ಲವೂ ಎಲ್ಲ ಮಹಿಳೆಯರಿಗೆ ಎಲ್ಲ ಕಾಲಕ್ಕೆ ಬೇಕಾದ ಉಪದೇಶಾವಳಿಗಳಾಗಿವೆ.

### ಹರಿವಂಶಾಭ್ಯುದಯಂ

ಬಂಧುವರ್ಮನ ಮೂರು ಕೃತಿಗಳಲ್ಲಿ ಹರಿವಂಶಾಭ್ಯುದಯವು ದೀರ್ಘಕಾವ್ಯವಾಗಿದೆ. ಇದು ಚಂಪೂರೂಪದಲ್ಲಿದ್ದು

೧೪ ಆಶ್ವಾಸಗಳನ್ನೊಳಗೊಂಡಿದೆ. ಇದರಲ್ಲಿ ಕವಿ ಉತ್ತಮ ವರ್ಣನೆಗಳಿಂದ ಕಾವ್ಯದ ಸೊಗಸನ್ನು ಹೆಚ್ಚಿಸಿದ್ದಾನೆ. ಇಲ್ಲಿ ಕಂಡುಬರುವ ನೇಮಿನಾಥನ ಕಥಾಭಾಗ ಸ್ವಲ್ಪವಾದರೂ ಪೂರ್ವ ಭಾವಿಯಾಗಿ ಬರುವ ಹರಿವಂಶ ಕುರುವಂಶಗಳ ಹಾಗೂ ಚಾರು ದತ್ತ ಪ್ರಕರಣದ ನಿರೂಪಣೆಯಲ್ಲಿ ಕಂಡುಬರುವ ಸೊಗಸು ಮನ ನೀಯವಾಗಿದೆ.

ಈ ಕಥೆಗೆ ಮೂಲಗ್ರಂಥವಾವುದನ್ನನುಸರಿಸಿರುವನೆಂಬು ದನ್ನು ಕವಿಯು ಹೇಳದಿದ್ದರೂ ಕೆಲವು ಸಂಸ್ಕೃತ ಗ್ರಂಥಗಳು ಮೂಲ ಆಕರ ಗ್ರಂಥಗಳಾಗಿವೆಯೆಂಬುದನ್ನು ತಿಳಿಯಬಹುದು. ಸಂಸ್ಕೃತದಲ್ಲಿ ಗುಣಭದ್ರನ ಉತ್ತರ ಪುರಾಣದ ಕಥೆ ಕನ್ನಡ ಪುರಾಣಗಳಿಗೆ ಮೂಲವಾಗಿರುವಂತೆ ಬಂಧುವರ್ಮನ ಹರಿವಂಶಾ ಭ್ಯುದಯಕ್ಕೂ ಆಕರವಾಗಿದೆ. ಆದರೆ, ಉತ್ತ.ಪು.ದಲ್ಲಿ ನೇಮಿ ನಾಥ ತೀರ್ಥಂಕರರ ಕಥೆಯ ಮೊದಲಲ್ಲಿ ಬರುವ ಅರ್ಹದ್ದಾಸ ಅಪರಾಜಿತ–ಮೊದಲಾದವರ ಕಥೆ ಹರಿವಂಶದಲ್ಲಿ ಕಂಡುಬರುವು ದಿಲ್ಲ. ಉತ್ತ.ಪು. ದಲ್ಲಿ ಸ್ವಲ್ಪ ಕಥಾಭಾಗ ಕಳೆದು ಮುಂದೆ ಬರುವ ಪ್ರಭಂಜನ ಮತ್ತು ಮೃಕಂಡು ದಂಪತಿಗಳ ಕಥೆಯಿಂದ ಇಲ್ಲಿನ ಕಥೆ ಪ್ರಾರಂಭವಾಗುತ್ತದೆ.

ಹರಿವಂಶದಲ್ಲಿ ಕಂಡುಬರುವ ಚಾರುದತ್ತ ಪ್ರಕರಣ ಉತ್ತ.ಪು.ದಲ್ಲಿಲ್ಲ. ಈ ಕಥೆಯನ್ನು ಜಿನಸೇನಾಚಾರ್ಯರ ಹರಿ ವಂಶದಿಂದ ತೆಗೆದುಕೊಂಡಿರುವಂತೆ ತೋರುತ್ತದೆ. ಇದು ಕರ್ಣ ಪಾರ್ಯನಲ್ಲಿಯೂ ಇರುವುದರಿಂದ ಬಂಧುವರ್ಮನು ಗುಣಭದ್ರ ಮತ್ತು ಕರ್ಣಪಾರ್ಯರಿಬ್ಬರಿಂದಲೂ ಉಪಯೋಗ ಮಾಡಿ ಕೊಂಡಿರಬಹುದು. ಆದರಲ್ಲಿಯೂ ಕಾವ್ಯದುದ್ದಕ್ಕೂ ಕರ್ಣ ಪಾರ್ಯನ ಅನುಸರಣೆ ಕಂಡುಬರುತ್ತದೆ.

ನೇಮಿನಾಥನ ಕಥೆಯನ್ನೊಳಗೊಂಡ ಈ ಕಾವ್ಯದಲ್ಲಿ ನೇಮಿನಾಥನು ಪ್ರಧಾನಪಾತ್ರವಾಗಿರಬೇಕಾಗಿದ್ದಿತು. ಆದರೆ ಧಾರ್ಮಿಕ ವ್ಯಕ್ತಿಯ ಚಿತ್ರ ಕೆಲವು ಕಟ್ಟುಪಾಡುಗಳಿಂದ ಸೀಮಿತ ಗೊಂಡಿರುವುದರಿಂದಲೊ ಏನೊ ಇಲ್ಲಿ ಬರುವ ಇತರ ಕೆಲವು ಪಾತ್ರಗಳೇ ಪ್ರಧಾನ ಸ್ಥಾನವನ್ನು ಪಡೆದುಕೊಂಡಿವೆ. ಕಾವ್ಯ ಧರ್ಮ ಧರ್ಮ ಎರಡನ್ನೂ ಒಟ್ಟೊಟ್ಟಿಗೆ ನಿರೂಪಿಸಬಯಸಿದ ಜೈನ ಕವಿಗಳು ಧರ್ಮವನ್ನು ಕಾಂತಾಸಮ್ಮಿತದಿಂದ ಹೇಳುವ ಪ್ರಧಾನ ಗುಣವನ್ನು ಅಳವಡಿಸಿಕೊಂಡಿದ್ದಾರೆ. ಆದುದರಿಂದಲೇ ಸಹೃದಯ ಹೃದಯರಂಜನೆಗೇ ಪ್ರಧಾನ ಸ್ಥಾನವನ್ನಿತ್ತು ಆ ಮೂಲಕ ಧರ್ಮಪ್ರಭಾವವನ್ನು ನೆಲೆಗೊಳಿಸಿದ್ದಾರೆ; ಪ್ರಧಾನ ಕಥೆಗೆ ಪೋಷಕವಾಗಿ ಇತರ ಕಥೆಗಳನ್ನೂ ವರ್ಣನೆಗಳನ್ನೂ ಅಗಾಧವಾಗಿ ತಂದಿದ್ದಾರೆ. ಹಾಗಾಗಿ ಕಾವ್ಯಕಥೆಗೆ ಅನವಶ್ಯಕ ವಾಗಿದ್ದ ಚಾರುದತ್ತ ಪ್ರಕರಣವನ್ನು ಇಲ್ಲಿ ತಂದು ಅದನ್ನು ಇಡೀ ಕಾವ್ಯದಲ್ಲಿಯೇ ಅತ್ಯಂತ ಉತ್ತಮ ರಸಸನ್ನಿವೇಶವನ್ನಾಗಿ ಚಿತ್ರಿಸಲಾಗಿದೆ.

## ಜೀವಸಂಬೋಧನಂ

ಬಂಧುವರ್ಮ ರಚಿಸಿರುವ ಜೀವಸಂಬೋಧನೆಯು ಧಾರ್ಮಿಕ ಗ್ರಂಥವಾಗಿದೆ. ಇದರಲ್ಲಿ ಜೈನಧರ್ಮದ ದ್ವಾದ ಶಾನುಪ್ರೇಕ್ಷೆಗಳನ್ನು ನಿರೂಪಿಸಲಾಗಿದೆ. ತತ್ತ್ವ ಗ್ರಂಥವಾದರೂ ಸಾಮಾನ್ಯ ಓದುಗರನ್ನೂ ತನ್ನೆಡೆಗೆ ಸೆಳೆದುಕೊಳ್ಳುವ ಸಾಮರ್ಥ್ಯವನ್ನು ಪಡೆದಿದೆ.

ಈ ಗ್ರಂಥವು ಜೀವನನ್ನು ಕುರಿತು ನಿರೂಪಿತವಾಗಿರುವ ಗ್ರಂಥವಾಗಿರುವುದರಿಂದ ಜೀವಸಂಬೋಧನಂ ಎಂಬ ಹೆಸರು

ಅನ್ವರ್ಥವಾಗಿದೆ. ಇದು ಚಂಪೂರೂಪವಾಗಿದ್ದು ಉತ್ಪಲ ಮಾಲೆ, ಚಂಪಕ–ಮೊದಲಾದ ಪ್ರಸಿದ್ಧ ವೃತ್ತಗಳಿಂದ, ಕಂದ ರಗಳೆಗಳಿಂದ, ತರಳ, ಮಾಲಿನಿ ಅಕ್ಕರ–ಮೊದಲಾದ ವಿಶೇಷ ಛಂದೋಪ್ರಕಾರಗಳಿಂದ ಕೂಡಿದೆ. ಇತರ ಚಂಪೂಕಾವ್ಯ ಗಳಲ್ಲಿ ಪದ್ಯ ಭಾಗ ಹೆಚ್ಚಿದ್ದು ಗದ್ಯ ಭಾಗ ಕಡಮೆಯಿದ್ದರೆ, ಇದರಲ್ಲಿ ಎರಡೂ ಸರಿಸಮನಾಗಿ ಉಪಯೋಗವಾಗಿವೆ. ಕೆಲವೆಡೆ ಗದ್ಯಗಳು ಹಿಂದಣ ಪದ್ಯಗಳ ಅನುವಾದದಂತಿದ್ದರೆ, ಕೆಲವೆಡೆ ವಿವರಣೆಯ ರೂಪವಾಗಿವೆ; ಮತ್ತೆ ಕೆಲವೆಡೆ ಪದ್ಯದ ವಿಷಯ ಕ್ಕಿಂತ ಹೆಚ್ಚಿನ ವಿಷಯಗಳನ್ನೊಳಗೊಂಡಿವೆ.

ಕಾವ್ಯದಲ್ಲಿ ಅರ್ಧಭಾಗ ತತ್ತ್ವನಿರೂಪಣೆಗೆ ಮೀಸಲಾದರೆ ಉಳಿದರ್ಧ ಈ ನಿರೂಪಣೆಗೆ ಇಂಬಾಗಿ ಚಿತ್ರಿಸಿರುವ ಕಥಾರೂಪಕ ಗಳಾಗಿವೆ. ಇದು ಮೇಲ್ನೋಟಕ್ಕೆ ಶಾಸ್ತ್ರಗ್ರಂಥವಾಗಿ ಕಂಡರೂ ಬಂಧುವರ್ಮನ ಕಾವ್ಯಕುಶಲತೆಯಿಂದ ಕಾವ್ಯಭ್ಯಾಸಿಗಳಿಗೆ ಉತ್ತಮ ಕಾವ್ಯವಾಗಿ ಪರಿಣಮಿಸಿದೆ.

ಇಂತಹ ಒಂದು ಕೃತಿಯ ನಿರ್ಮಾಣಕ್ಕೆ ಬಂಧುವರ್ಮ ತನ್ನ ಹಿಂದಣ ಹಲವಾರು ಕೃತಿಗಳನ್ನು ಆಶ್ರಯಿಸಿರಬಹುದು; ಅನುಪ್ರೇಕ್ಷೆಗಳಿಗೆ ಹಾಗೂ ದೃಷ್ಟಾಂತ ಕಥೆಗಳಿಗೆ ಹಲವು ಆಕರ ಗಳಿರಬಹುದು. ಆದರೆ ಈ ಮೊದಲು ದ್ವಾದಶಾನುಪ್ರೇಕ್ಷೆಗಳಿ ಗನುಸಾರವಾಗಿಯೇ ರಚಿತವಾದ ಯಾವುದೇ ಕೃತಿ ಕನ್ನಡದಲ್ಲಿ ಕಂಡುಬರುವುದಿಲ್ಲ. ಇಂತಹುದೇ ತತ್ತ್ವ ನಿರೂಪಣೆಯನ್ನೊಳ ಗೊಂಡ ನಯಸೇನನ ಧರ್ಮಾಮೃತ ದೊರೆತರೂ ಅನುಪ್ರೇಕ್ಷೆ ಗಳೆಲ್ಲವನ್ನೂ ಕ್ರಮವಾಗಿ ಒಳಗೊಂಡಿರುವುದಿಲ್ಲ. ಆದುದರಿಂದ ಬಂಧುವರ್ಮನಿಗೆ ಪ್ರಾಕೃತ ಸಂಸ್ಕೃತ ಗ್ರಂಥಗಳೇ ಮೂಲವಾಗಿರ ಬಹುದು. ಹಲವು ಶಾಸ್ತ್ರಗ್ರಂಥಗಳ ಕಥಾಸಂಗ್ರಹಗಳ ಅಭ್ಯಾಸ

ದಿಂದ ಬಂಧುವರ್ಮ ತನ್ನದೇ ಕಾವ್ಯನಿರ್ಮಾಣಮಾಡಿರ ಬಹುದು.

ಅಲ್ಲದೆ ತಮಿಳು ಭಾಷೆಯಲ್ಲಿಯೂ ಇದೇ ವಿಷಯವನ್ನೊಳ ಗೊಂಡ ಜೀವಸಂಬೋಧನೆ ಎಂಬ ಕಾವ್ಯವಿರುವುದಾಗಿ ಪಂಡಿತ ಎಚ್. ಶೇಷಯ್ಯಂಗಾರ್ ಅವರು ತಿಳಿಸುತ್ತಾರೆ. "ಅದರಲ್ಲಿಯೂ ಗದ್ಯ ಪದ್ಯಗಳು ಸಮಾನವಾಗಿರುವುದಲ್ಲದೆ ಗದ್ಯವು ಪದ್ಯದ ವ್ಯಾಖ್ಯಾನವೆಂಬ ಪ್ರತೀತಿಯೂ ಉಂಟು. ಇವೆರಡಕ್ಕೂ ಈ ಬಗೆಯ ಸಾಮ್ಯವೊಂದಲ್ಲದೆ ಉಳಿದ ಎಲ್ಲಾ ಬಗೆಯಲ್ಲಿ ಸಾಮ್ಯ ವುಂಟು" ಎಂದು ಕೆಲವು ಉದಾಹರಣೆಗಳನ್ನು ನೀಡಿ, ಕೊನೆಗೆ "ಆದರೆ ದ್ರಾವಿಡ ಭಾಷಾಸಾಹಿತ್ಯ ಶಾಸ್ತ್ರಗ್ರಂಥಗಳಲ್ಲಿ ಸಾಮಾನ್ಯವಾಗಿ ಸಂಸ್ಕೃತ ಪ್ರಾಕೃತಗ್ರಂಥಗಳೇ ಆಧಾರವಾಗಿ ರುವುದರಿಂದ ಇವೆರಡಕ್ಕೂ ಮೂಲಭೂತವಾದ ಸಂಸ್ಕೃತದ ಅಥವಾ ಪ್ರಾಕೃತದ ಜೀವಸಂಬೋಧನೆ ಎಂಬ ಗ್ರಂಥವೊಂದಿದ್ದಿರಬಹು ದೆಂಬ ಶಂಕೆಗೂ ಅವಕಾಶವುಂಟು"[1] ಎಂಬ ನಿರ್ಣಯಕ್ಕೆ ಬಂದಿ ದ್ದಾರೆ.

ಆದರೆ ಇವರು ತಮಿಳು ಜೀವಸಂಬೋಧನೆಗೂ ಈ ಕನ್ನಡ ಜೀವಸಂಬೋಧನೆಗೂ ಇರುವ ಹೋಲಿಕೆಗಳನ್ನು ಗುರು ತಿಸುವಲ್ಲಿ ಮುಂಡಕೌಶಿಕನ ಕಥೆಯೊಂದನ್ನು ಮಾತ್ರ ಉದಾಹರಿ ಸಿದ್ದಾರೆ. ಈ ಕಥೆಗೆ ಬಂಧುವರ್ಮ ತಮಿಳುಗ್ರಂಥವನ್ನೇ ಆಧರಿಸಿರಬಹುದು ; ಇಲ್ಲವೆ ತಮಿಳು ಕವಿಯೇ ಬಂಧುವರ್ಮ ನನ್ನು ಅನುಸರಿಸಿರಬಹುದು. ಏಕೆಂದರೆ ಬಂಧುವರ್ಮನು ಉಳಿದ

[1] ಜೀವಸಂಬೋಧನಂ : ಬಂಧುವರ್ಮ. ಸಂ. ಎಚ್. ಶೇಷ ಯ್ಯಂಗಾರ್, ಸರ್ಕಾರೀ ಪ್ರಾಚ್ಯ ಕೋಶಾಗಾರ, ಮದರಾಸು, 1955 ಪು. 8. 9

ತನ್ನ ವಿಷಯ ನಿರೂಪಣೆಗೆ ಇತರ ಪ್ರಾಕೃತ ಸಂಸ್ಕೃತ ಕನ್ನಡ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡಿರುವುದನ್ನು ನಾವು ನೋಡ ಬಹುದು.

ಕುಂದಕುಂದರ ಬಾರಹ ಅಣುವೆಕ್ಖಾ ಗ್ರಂಥದ ಕೆಲವು ಭಾಗಗಳ ಹೋಲಿಕೆಯನ್ನು ಬಂಧುವರ್ಮನಲ್ಲಿ ಕಾಣಬಹು ದಾಗಿದೆ. ಹಾಗೆಯೆ ಸ್ವಾಮಿ ಕುಮಾರರ ಕಾರ್ತಿಕೇಯಾನುಪ್ರೇಕ್ಷೆ ಯಿಂದಲೂ ಪ್ರಯೋಜನ ಪಡೆದಿರುವುದನ್ನು ಗುರುತಿಸಬಹುದು. ಅಲ್ಲದೆ ವರಾಂಗನ ಕಥೆಯಲ್ಲಿ ಜಟಿಲನ ವರಾಂಗ ಚರಿತೆಯ ಅನು ಕರಣೆ ಕಂಡುಬರುವಂತೆ ಧನ್ಯಕುಮಾರನ ಕಥೆಗೆ ರಾಮಚಂದ್ರ ಮುಮುಕ್ಷುವಿನ ಪುಣ್ಯಾಸ್ರವ ಕಥಾಕೋಶ ಮೂಲವಾಗಿದೆ. ಸಗರ ಚಕ್ರವರ್ತಿಯ ಕಥೆಗೆ ರನ್ನನ ಅಜಿತನಾಥ ಪುರಾಣದ ಕಥೆ ಮೂಲವಾಗಿರುವಂತೆ, ಸುಕುಮಾರನ ಕಥೆಯಲ್ಲಿ ಶಾಂತಿನಾಥನ ಸುಕುಮಾರ ಚರಿತೆಯ ಬಹಳಷ್ಟು ಅನುಕರಣೆಗಳು ಕಂಡುಬರು ತ್ತವೆ. ಉದ್ದಾಯನ ಅಥವಾ ಪ್ರಭಾವತಿ ಕಥೆಗೆ ಪುಣ್ಯಾಸ್ರವ ಮತ್ತು ಧರ್ಮಾಮೃತಗಳೆರಡರಿಂದಲೂ ಉಪಕೃತನಾಗಿರುವು ದನ್ನು ಕಾಣಬಹುದು.

ಹೀಗೆ ಬಂಧುವರ್ಮನು ಜೀವ ಸಂಬೋಧನಾ ಕೃತಿ ರಚ ನೆಗೆ ವಿವಿಧ ಮೂಲಗಳನ್ನು ಅನುಸರಿಸಿರುವುದರಿಂದ ಈ ಕೃತಿಗೆ ಯಾವುದೋ ಒಂದು ಕೃತಿ ಮೂಲವಿರಬಹುದೆಂಬುದನ್ನು ಹೇಳ ಲಾಗುವುದಿಲ್ಲ.

ಈ ಕೃತಿಯಲ್ಲಿ ಬರುವ ಧಾರ್ಮಿಕ ವಿಷಯಗಳನ್ನೊಳ ಗೊಂಡ ಈ ಹನ್ನೆರಡು ಅನುಪ್ರೇಕ್ಷೆಗಳು ವಿಷಯ ವಿಸ್ತಾ ರತೆಯನ್ನು ಹೊಂದಿವೆ. ಲೋಕದ ವಸ್ತುಗಳೆಲ್ಲವೂ ಅಶಾಶ್ವತ ವೆಂದರಿತಾಗ ಹುಟ್ಟು ಸಾವುಗಳ ಸಮಸ್ಯೆಯನ್ನು ನಿವಾರಿಸುವ

ತತ್ತ್ವದತ್ತ ಗಮನ ಹರಿಯುತ್ತದೆ. ಮನುಷ್ಯನು ತಾನು ಮಾಡಿದ ಕಾರ್ಯಗಳ ಬಗೆಗೆ ಒದಗಿಬಂದ ಕರ್ಮವನ್ನು ಅನುಭವಿಸಿಯೇ ತೀರಬೇಕು; ತನ್ನ ಕರ್ಮಬಂಧಗಳಿಗೆ ಕಾರಣವನ್ನರಿತು ಅದನ್ನು ದೂರಮಾಡಲು ಪ್ರಯತ್ನಿಸಬೇಕು. ಇಂತಹ ಕರ್ಮನಾಶಕ್ಕೆ ಮಾಡಬೇಕಾದ ಕಾರ್ಯಕ್ಕೆ ಅನುಪ್ರೇಕ್ಷೆಗಳು ದಿಕ್ಸೂಚಿಯಾಗಿ ನಿಲ್ಲುತ್ತವೆ.

ಈ ತತ್ತ್ವದ ನಿರೂಪಣೆಯನ್ನು ಕೈಗೊಂಡ ಬಂಧುವರ್ಮ ಉತ್ತಮ ಚಿತ್ರಗಳ ಮೂಲಕ ಜೀವನನ್ನು ಎಚ್ಚರಿಸಿದ್ದಾನೆ. ಈ ಸಂಸಾರ ಜೀವ–ಎಲ್ಲ ನಶ್ವರ; ಮೃತ್ಯುರಾಜನ ಬರವನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲವೆಂಬುದನ್ನು

ಯಂತ್ರಂಗಳುಮಮಿತ ಮಹಾ
ತಂತ್ರಂಗಳುಮನುಪಮಾನಮೆನಿಸಿದ ಪಲವುಂ
ತಂತ್ರಂಗಳುಮೇಂ ಕಾವುವೆ
ಸಂತ್ರಾಸ ಕರೋಗ್ರ ಮೃತ್ಯುರಾಜನ ಬರವಂ ೨–೫

ಎಂಬುದಾಗಿ ಬಹು ನೇರವಾಗಿ ಹೇಳುತ್ತಾನೆ. ಬರಿಯ ಓದಿನಿಂದ ಪೂಜೆ ಪುರಸ್ಕಾರಗಳಿಂದ ಯಾವ ಪ್ರಯೋಜನವೂ ಆಗದೆಂಬುದನ್ನು

ಪಲವೋದಂ ನೆಱೆಯೋದಿ ಪೂಣ್ದು ಪಲವುಂ ಕಾಲಂ
ತಪಂಗೆಯ್ದುಂತಿ
ರ್ದಲೆ ನೀಂ ಖ್ಯಾತಿಗಮಿಲ್ಲಿ ಮಾಡುವಿನಿಸಾನುಂ ಪೂಜೆಗಂ
ಮೆಚ್ಚಿಡಿಂ
ದೊಲಿವಾ ಕೇಳ್ ಮರನಿಟ್ಟು ಕಾದು ಪಲವುಂ
ಪೂಗೊಯ್ದು ಕೊಂಡಿರ್ಪ ಗಾ

ವಿಲನಂತಪ್ಪುದೆ ಸೈರಿಸಿರ್ದು ಮುನಿಪಾ ಕೆಯ್ಯೊಳ್
ಮಹಾಸೌಖ್ಯಮಂ ೨-೧೮

ಎಂದು ನಿರೂಪಿಸಿದ್ದಾನೆ.

ಈ ಸಂಸಾರ ಅಸಾರ, ಇದರಲ್ಲಿ ಯಾವ ಸತ್ವವೂ ಇಲ್ಲ. ಜೀವನು ಅನೇಕ ಜನ್ಮಗಳಲ್ಲಿ ಹುಟ್ಟುತ್ತಾನೆ. ಹಾಗೆ ಹುಟ್ಟಿದಾಗ ಮಗನೇ ತಂದೆಯಾಗುವ, ಮಗಳೇ ಹೆಂಡತಿಯಾಗುವ ವಿಚಿತ್ರ ಸನ್ನಿವೇಶಗಳು ಒದಗಿಬರುತ್ತವೆ ಎಂಬುದನ್ನು

ಮಗನಕ್ಕುಮೊಂದು ಭವದೊಳ್
ಮಗನುಂ ಬಳಿಕೊರ್ಮೆ ತಂದೆಯಕ್ಕುಂ ಮತ್ತಂ
ಮಗನಕ್ಕುಮೊರ್ಮೆ ಮಗಳುಂ
ಮಗುಳ್ದು ಭವಾಂತರದೊಳೊರ್ಮೆ ಪೆಂಡತಿಯಕ್ಕುಂ
೫-೨೫

ಎಂಬುದಾಗಿ ಸರಳ ಸುಂದರ ರೀತಿಯಲ್ಲಿ ವಿವರಿಸಿದ್ದಾನೆ. ಇದನ್ನು ವಸಂತತಿಲಕೆ ಕಥೆಯ ಮೂಲಕ ಸ್ಪಷ್ಟಪಡಿಸುತ್ತಾನೆ. ಇಲ್ಲಿ ಸಹೃದಯರು ಸಂಸಾರವನ್ನೇ ಜಿಗುಪ್ಸೆಯಿಂದ ನೋಡುವ ಸನ್ನಿವೇಶ ಮೂಡಿಬಂದಿದೆ. ಕಮಳೆಯು ಮಗುವನ್ನು ತೂಗುತ್ತಾ

ಜೋ ನೀಂ ಮಗನೇ ತಮ್ಮನೆ
ಜೋ ನೀನಳಿಯಮ್ಮ ಮೈದುನಾ ಕಿಱಿಯಮ್ಮಾ
ಜೋ ನಿಮ್ಮಬ್ಬೆಗೆ ಮೊಮ್ಮನೆ
ಜೋ ನಿಮ್ಮಮ್ಮಂಗೆ ತಮ್ಮನಪ್ಪನೆ ಜೋ ಜೋ ೫-೩೩
ಜೋ ನಿನಗಾದ ತಾಯೆನಗೆ ತಾಯ್ವಿರುಮಕ್ಕನು
ಮತ್ತೆಯುಂ ದುರ

ಜ್ಞಾನದಿನೊಂದಿದತ್ತಿಗೆಯುಮಾದಳಿದಬ್ಬೆಯುಂ ಪಾಪ
ದೋಳಿ ಜೋ
ಜೋ ಸಿನಗಾದ ತಂದೆಯೆನಗಣ್ಣನುಮಾಣ್ಮನುಮಯ್ಯ
ನಾದನಿಂ
ತಾನೆಯಿದಣ್ಣ ನಮ್ಮ ಕಡುಪಾಪದ ಬಂಧನಮಲ್ತೆ
ಬಾಲಕಾ ೫-೩೮

ಎಂದು ಹೇಳುವ ಮಾತುಗಳು ಮರ್ಮಾಘಾತಕವಾಗಿವೆ. ಒಡ ಹುಟ್ಟಿದವರೇ ಗಂಡಹೆಂಡಿರಾಗುವ, ಮತ್ತೆ ಗಂಡನೇ ತಾಯಿ ಯೊಡನೆ ಸೇರಿ ಮಗುವಾಗುವ ಈ ಎಲ್ಲವನ್ನೂ ತಿಳಿದ ಕಮಳೆ ಹೀಗೆ ಹಲುಬಿದುದು ಸಹಜವಾಗಿದೆ.

ಇಂತಹುದೇ ಮತ್ತೊಂದು ಸನ್ನಿವೇಶವೆಂದರೆ ಸುಕುಮಾರನ ಕಥೆ. ಇಂದ್ರಸಮ ಸೌಖ್ಯವನ್ನೂ, ರತಿಯಂತಹ ಮಡದಿಯರನ್ನೂ ನಿರ್ವೇಗದಿಂದ ತೊರೆದ ಸುಕುಮಾರನು ವನಕ್ಕೆ ನಡೆದಾಗ, ಆ ಸ್ತ್ರೀಯರು ಗೋಳಿಡುವುದನ್ನೂ, ಅವರು ಮತಿ ವಿಕಳರಾಗಿ ಕಂಡ ಕಂಡ ವಸ್ತುಗಳೆಲ್ಲವನ್ನೂ ಕೂಗಿ ಕರೆದು ತಮ್ಮ ಸುಕುಮಾರನನ್ನು ಕಂಡಿರೇ ಎಂದು ಕೇಳುವುದನ್ನೂ ಹೃದಯಂ ಗಮವಾಗಿ ಚಿತ್ರಿಸಲಾಗಿದೆ. ಸುರಸಮಾನ ಸೌಖ್ಯವನ್ನು ಸುಕುಮಾರನಿಂದ ಪಡೆಯುತ್ತಿದ್ದ ಪತ್ನಿಯರು ವಿವಿಧ ರೀತಿಯಾಗಿ ಗೋಳಿಡುವುದು ಆ ಸ್ತ್ರೀಯರ ಮನೋವೇದನೆಯನ್ನೂ ಸುಕುಮಾರನ ಹಿಂದಣ ಸೌಖ್ಯೋನ್ನತಿಯನ್ನೂ ಸೂಚಿಸುತ್ತದೆ.

ಈ ದೇಹ ನಶ್ವರ, ಹೇಯವಾದುದು ಎಂಬುದನ್ನು ಕವಿಯು

ಮೂಳೆಯ ಕಂಭವಿಲ್ಲಿ ನಿಡುಯೆಲ್ವಿನ ಜಿಮ್ಮರನಂತೆ
ಪತ್ತಿಕೊಂ

ಡೋಳಿಯೆ ನೀಳ್ದು ನಿಂದ ಬೞಿಯೆಲ್ ಗೞಿಗಳ್ ಸೆರೆ
ಪಂಜರಂ ತಗು
ಳ್ದೀಳಿದಮುಪ್ಪ ತೋಲ್ ಪೊದಕೆ ಮಾಂಸಮೆ ಕೇರ್ಗಳ
ಮೇಧ್ಯಪೂರ್ಣ ದೇ
ಹಾಳಯಮಿಂತಶುದ್ಧಮಿದನೇಂ ಶುಚಿಯೆಂಬುದೆ ಭವ್ಯ
ಜೀವನೇ ೭–೨೨

ಪ್ರಾಣದ ಪೋಗಿನೊಳ್ ಪೆಣನಿದಂ ಕಳೆಯಿಂ ಸುಡಿ
ಮೆಂದು ಪೇೞ್ವರಾ
ಪ್ರಾಣಮುನೋವಿ ಸದ್ಗುಣಮನೊಕ್ಕಡೆ ಬಾೞ್ವೆಣನೆಂಬ
ರುರ್ಕಿನೊಳ್
ಪ್ರಾಣಮುಮೊಳ್ಗುಣಂಗಳುಮಪೊರ್ವೆಯೆ ಪೋದೊಡೆ
ನಾಯ ಬಾಯ್ಗೆ ತಾಂ
ಮಾಣದೆ ಬಂದೊಡಲ್ ಪಡುಕೆಯೆಂಬರಿದೇಂ ತನು ಕಷ್ಟ
ಮಾದುದೋ ೭–೨೪

ಎಂದು ನೀಡುವ ಚಿತ್ರಣ ಎಂತಹ ಸುಕುಮಾರನನ್ನೂ ಸಂಸಾರಕ್ಕೆ ಹೇಸಿ ಹೊರಗುಳಿಯುವಂತೆ ಮಾಡುತ್ತದೆ.

ಜೀವಸಂ.ಯಲ್ಲಿ ತತ್ತ್ವನಿರೂಪಣೆಗಾಗಿ ನೀಡುವ ದೃಷ್ಟಾಂತ ಕಥೆಗಳು ಆದಷ್ಟು ಸಂಗ್ರಹವಾಗಿರಬೇಕೆಂಬುದು ಕವಿಯ ಬಯಕೆಯಾಗಿರುವಂತೆ ಕಥಾಸರಣಿಗೆ ಕುಂದುಂಟಾಗ ಬಾರದೆಂಬುದೂ ಆಗಿದೆ. ಈ ಎರಡು ದೃಷ್ಟಿಯಿಂದಲೂ ಬಂಧು ವರ್ಮನು ಯಶಸ್ವಿಯಾಗಿರುವುದನ್ನು ಕಾಣಬಹುದು. ಯಶೋ ಭದ್ರೆಗೆ ಮಕ್ಕಳಾಗದಿರುವುದು, ಅದರಿಂದ ಆಕೆಯು ದುಃಖ

ಗೊಳ್ಳುವುದು, ಅಲ್ಲಿಗೆ ಒಬ್ಬ ಋಷಿ ಬರುವುದು, ಅವರನ್ನು ಕಾಣಲು ತೆರಳುವುದು–ಇವಿಷ್ಟನ್ನೂ

ಅಂತಪ್ಪಾಕೆಗೆ ಮಕ್ಕಳಿಲ್ಲದೆ ಕರಂ ಸಂಕ್ಲೇಶದಿಂದಾಗಳುಂ
ಚಿಂತಾಕ್ರಾಂತೆಯುಮಾಗಿ ಪೋಗೆ ಪಲವುಂ ಕಾಲಂ ಬೞಿಕ್ಕಲ್ಲಿಗ
ತ್ಯಂತ ಜ್ಞಾನವಿಶೇಷರಪ್ಪ ಮುನಿಪರ್ ಬಂದಿರ್ದೊಡಾ ಕಾಂತೆ ಕೇ
ಳ್ದಂತಾಗಳ್ ವಿವಿಧಾರ್ಚನಾಸಹಿತಮುಂತಾ ಸಂಯಮೋದ್ಯುಕ್ತರಂ ೬–೩೨

ಎಂಬ ಒಂದೇ ಒಂದು ಪದ್ಯದಲ್ಲಿ ಅಡಗಿಸಿರುವುದು ನಿಜಕ್ಕೂ ಮೆಚ್ಚತಕ್ಕುದಾಗಿದೆ.

ವ್ಯಸನಿಯಾದವನು ಹೇಗೆ ಹುಟ್ಟುಗುರುಡನಿಗಿಂತಲೂ ಕಡೆ ಎಂಬುದನ್ನು

ಕುರುಡಂ ಕಣ್ಣಿಂದಱಿಯಂ
ಕರಮಳಿಪಿದ ಬೆಸನಿ ಯಾವ ತೆಱದೊಳಮಱಿಯಂ
ಕುರುಡಂ ಕುರುಡನೆ ಬೆಸನಿಯೆ
ಕುರುಡಂ ಗತಿಯಪ್ಪ ದೆಸೆಯನಱಿಯದೆ ಕೆಟ್ಟಂ ೮–೧೩

ಎಂದು ಹೇಳಿ ಅತ್ಯಂತ ಚಾಣಾಕ್ಷತನದಿಂದ ಹಿಡಿದಿರಿಸಿದ್ದಾನೆ. ಇದರಲ್ಲಿ ತತ್ತ್ವನಿರೂಪಣೆಯಡಗಿದ್ದರೂ ಅದನ್ನು ತಿಳಿಯ ಹೇಳುವ ರೀತಿ ಅತ್ಯಂತ ಮಾರ್ಮಿಕವಾಗಿದೆ; ಸಹೃದಯರ ಮನಸ್ಸನ್ನು ನಾಟುವುದರಲ್ಲಿ ಯಶಸ್ವಿಯಾಗಿದೆ.

## ಸತಿಧರ್ಮಸಾರ

ಬಂಧುವರ್ಮನ ಮೂರನೆಯ ಕೃತಿಯಾದ ಸತಿಧರ್ಮ ಸಾರವನ್ನು ರಚಿಸಿದಾತ ಬಂಧುವರ್ಮ ಎಂಬುದು ಸ್ಪಷ್ಟವಾಗಿ ಕೃತಿಯಲ್ಲಿಲ್ಲದಿರುವುದು ಸಂಶಯಕ್ಕೆಡೆಗೊಟ್ಟಿದೆ. ಆದರೆ ಕೃತಿಯ ಕೊನೆಯಲ್ಲಿ

ಎನಿತನುಪ್ರೇಕ್ಷೆಯುವೆಲ್ಲವು
ನನುವಾಗಿಯೆ ಪೇಟ್ದ ಬಂಧುವರ್ಮ ಕವೀಂದ್ರ
ಮನವೊಲಿದು ಕೇಳ್ವುದೆಲ್ಲರ್
ಘನಸಾರ ಸುಬೋಧೆ ಜೀವಸಂಬೋಧನೆಯಂ ೧೯೦

ಎಂದು ಹೇಳಿರುವಲ್ಲಿ ತನ್ನ ಹೆಸರನ್ನು ಹೇಳಿಕೊಂಡರೂ ಜೀವ ಸಂಬೋಧನೆಯನ್ನು ಹೇಳಿರುವೆನೆಂದಿರುವುದರಿಂದ ಸತಿಧರ್ಮ ಸಾರಕ್ಕೆ ಅನ್ವಯಿಸದೆಂದು ಹೇಳಬಹುದು. ಈಗಾಗಲೆ ಜೀವಸಂಬೋಧನೆಯನ್ನು ರಚಿಸಿದ್ದಂತಹ ಈತನು ಜೀವ ಸಂಬೋಧನೆಯಲ್ಲಿ ಅನುಪ್ರೇಕ್ಷೆಗಳನ್ನು ಹೇಳಿದ್ದೇನೆ ಎಂದು ಸತಿಧರ್ಮಸಾರದಲ್ಲಿ ಸೂಚಿಸಿರಬಹುದು. ಸತಿಧರ್ಮಸಾರವು ನೀತಿ ನಿಯಮಗಳ ಗ್ರಂಥವಾಗಿದೆ. ಕಾವ್ಯದ ಮೊದಲಲ್ಲಿ 'ಸತಿಧರ್ಮ ಸಾರವಂ ವಿರಚಿಸುವೆಂ' ಎಂದು ಈ ಕೃತಿಯ ಹೆಸರನ್ನು ಇತರ ಎರಡು ಕೃತಿಗಳಲ್ಲಿ ಹೇಳಿರುವಂತೆಯೇ ಹೇಳಿದ್ದಾನೆ. ಮೇಲಾಗಿ ಇತರ ಎರಡು ಕೃತಿಗಳಲ್ಲಿ ಜಿನರು, ಸಿದ್ಧರು, ಆಚಾರ್ಯರು, ಉಪದೇಶಕರು, ಸಾಧು ಗಳನ್ನು ಕ್ರಮವಾಗಿ ಸ್ತುತಿಸಿರುವಂತೆಯೇ ಇಲ್ಲಿಯೂ ಮಾಡ ಲಾಗಿದೆ. ಇತರ ಕೃತಿಗಳಿಗೂ ಇದಕ್ಕೂ ಇರುವ ಹೋಲಿಕೆ

ಗಳಿಂದ ಹಾಗೂ ಬಂಧುವರ್ಮನ ಹೆಸರು ಕೃತಿಯಲ್ಲಿ ಕಂಡು ಬರುವುದರಿಂದ ಇದನ್ನು ಈತನದೆಂದೇ ಪರಿಗಣಿಸಲಾಗಿದೆ.

ಸತಿಧರ್ಮಸಾರವು ಶ್ರಾವಕಿಯರಿಗೆ ಹಿತವಚನಗಳನ್ನೀಯುವ ಒಂದು ಚಿಕ್ಕ ಗ್ರಂಥವಾಗಿದೆ. ಕೃತಿಯಲ್ಲಿ ೧೮೯ ಕಂದಪದ್ಯಗಳೂ ಒಂದು ಪ್ರಾಕೃತ ಗಾಹೆಯೂ ಇವೆ. ಗೃಹಿಣಿಯು ನಿತ್ಯಗೆಲಸಗಳಲ್ಲಿ ನಡೆದುಕೊಳ್ಳಬೇಕಾದ ರೀತಿನೀತಿಗಳನ್ನೂ, ವಹಿಸಬೇಕಾದ ಅಗತ್ಯ ಎಚ್ಚರಿಕೆಯನ್ನೂ ಇದರಲ್ಲಿ ಕಾಣುತ್ತೇವೆ.

ಸಾಹಿತ್ಯದಲ್ಲಿ ಇಂತಹ ಕೃತಿಗಳು ತೀರಾ ವಿರಳವೆಂದೇ ಹೇಳಬೇಕಾಗಿದೆ. ಅದರಲ್ಲಿಯೂ ಕನ್ನಡ ಸಾಹಿತ್ಯದಲ್ಲಿ ಇಂತಹ ೧೨ನೆಯ ಶತಮಾನದ ಕೃತಿ ದೊರೆತಿರುವುದು ಅತ್ಯಂತ ವಿಶೇಷವೆಂದೇ ಗಣಿಸಬೇಕಾಗಿದೆ. ಏಕೆಂದರೆ, ಇದರಲ್ಲಿ ಅಂದಿನ ಸಾಮಾಜಿಕ ಕಟ್ಟುಕಟ್ಟಳೆಗಳು ನಮಗೆ ಸ್ಪಷ್ಟವಾಗಿ ಗೋಚರವಾಗುತ್ತವೆ. ಇದರಲ್ಲಿ ಕಂಡುಬರುವ ಕೆಲವು ವಿಷಯಗಳು ಜೈನ ಶ್ರಾವಕಿಯರಿಗೇ ಮೀಸಲಾಗಿದ್ದರೂ ಉಳಿದ ವಿಷಯಗಳು ಎಲ್ಲ ವರ್ಗದ ಸ್ತ್ರೀಯರಿಗೂ ಉಪಯುಕ್ತವಾದುವಾಗಿವೆ.

ಜಿನರಲ್ಲದನ್ಯದೈವವ
ಮನ ವಚನಂ ಕಾಯಮೆಂಬ ತ್ರಿಕರಣದಿಂದಂ
ನೆನೆಯದಿರು ಪೂಜೆ ಮಾಡದಿ
ರನವರತಂ ಮಾಡು ಜಿನರ ಪದಪೂಜೆಗಳಂ ೧೬

ಜೈನರಲ್ಲದವರ ಮನೆಯಲಿ
ಜೈನರ್ ಕೊಳಲಹುದೆ ಪಾಲು ತುಪ್ಪವ ಮೊಸರಂ
ಜೈನರಲ್ಲಶುದ್ಧ ದುರ್ಲಭ
ಜೈನರುಮಲ್ಲದರ ಮನೆಯ ರಸ ತ್ರಸದಮಯಂ ೮೦

ಎಂಬಂತಹ ಕೆಲವು ಹೇಳಿಕೆಗಳನ್ನು ಬಿಟ್ಟರೆ ಉಳಿದವೆಲ್ಲ ಎಲ್ಲ ಮಹಿಳೆಯರಿಗೂ ಎಲ್ಲ ಕಾಲಕ್ಕೂ ಅನ್ವಯವಾಗುತ್ತವೆ.

ಈ ಕೃತಿಯಲ್ಲಿ ಕವಿಯ ಲೋಕಾನುಭವವೂ, ಉತ್ತಮ ರೀತಿಯ ನಡೆವಳಿಕೆಯಲ್ಲಿ ಈತನಿಗಿರುವ ಆಸಕ್ತಿಯೂ ಗೋಚರವಾಗುತ್ತವೆ. ಅಲ್ಲದೆ ಜೈನಧರ್ಮದ ಶ್ರೇಷ್ಠತೆಯ ಬಗೆಗೆ ಅಪಾರ ನಂಬುಗೆಯನ್ನು ಹೊಂದಿದ್ದಾನೆ. ಪ್ರೀತಿ ವಾತ್ಸಲ್ಯಗಳಿಂದ ಇತರ ಧರ್ಮದವರನ್ನು ಸದ್ಧರ್ಮದತ್ತ ತರುವುದು ಉತ್ತಮವೆಂಬ ಬುದ್ಧಿವಾದವನ್ನು ಮಾಡಿದ್ದಾನೆ. 'ಜಿನಧರ್ಮವ ಬಿಡುವವರಂ ಅನುವಿಂದಂ ತಿಳುಪಿಯುವರ ಧರ್ಮದಿ ನಿಲಿಸಲ್ ಜನಿಯಿಸುವುದು ಬಹಳ ಪುಣ್ಯಂ' (೧೮) ಎಂಬಂತಹ ಹೇಳಿಕೆಗಳನ್ನು ನೀಡಿದ್ದಾನೆ.

ಹನ್ನೆರಡು ರೀತಿಯ ವ್ರತಗಳನ್ನೂ, ಶ್ರಾವಕರ ಹನ್ನೊಂದು ನೆಲೆಗಳನ್ನೂ ತಿಳಿದುಕೊಳ್ಳಬೇಕೆಂದು ಸೂಚಿಸುತ್ತಾನೆ. ಗೃಹಕೃತ್ಯದಲ್ಲಿ ತೊಡಗಿರುವ ಸ್ತ್ರೀಯು ನೀರನ್ನು ತರುವಾಗ, ಅದನ್ನು ಕಾಯಿಸುವಾಗ ಅನುಸರಿಸಬೇಕಾದ ಮಾರ್ಗಗಳನ್ನು ಅತ್ಯಂತ ಸರಳವಾಗಿ ನಿರೂಪಿಸಲಾಗಿದೆ. ಹಾಲಿನಿಂದ ಮೊಸರು ಬೆಣ್ಣೆಗಳನ್ನು ಮಾಡುವಿಕೆ, ಅವುಗಳನ್ನು ಉಪಯೋಗಿಸುವ ರೀತಿ ನೀತಿ, ಅಕ್ಕಿ ಗೋಧಿ ದ್ವಿಧಳ ಧಾನ್ಯಗಳು ಎಣ್ಣೆ-ಮೊದಲಾದ ದೈನಿಕ ಉಪಯೋಗದ ಎಲ್ಲ ಪದಾರ್ಥಗಳ ಬಗೆಗೂ ತಿಳುವಳಿಕೆಯನ್ನು ನೀಡುವ ಬಂಧುವರ್ಮ ಗೃಹಿಣಿಯರು ಚೊಕ್ಕಟವಾಗಿರುವುದಕ್ಕೆ ಪ್ರಾಮುಖ್ಯತೆಯನ್ನು ನೀಡುತ್ತಾನೆ.

ಭಕ್ಷ್ಯ ಭೋಜ್ಯಗಳ ತಯಾರಿಕೆ, ಉಪಯೋಗ ಮಾಡುವ ರೀತಿ, ಅದರಲ್ಲಿ ಯಾವುದು ಯೋಗ್ಯ ಯಾವುದು ಯೋಗ್ಯವಲ್ಲ-ಎಂಬುದೆಲ್ಲದರ ಬಗೆಗೆ ವಿವರಣೆ ನೀಡುತ್ತಾನೆ. ಉಪಯೋಗಿಸಿದ ಪಾತ್ರೆ ತಟ್ಟೆಗಳನ್ನು ಶುಚಿಗೊಳಿಸುವುದು, ಅದರ ಒಪ್ಪ

ರಣಗಳು-ಮೊದಲಾದುವುಗಳ ಬಗೆಗೆ ನೀಡುವ ತಿಳುವಳಿಕೆ ಗೃಹಕೃತ್ಯದ ಬಗೆಗೆ ಬಂಧುವರ್ಮನ ಕಾಳಜಿಯನ್ನು ವ್ಯಕ್ತಪಡಿಸುತ್ತದೆ. ಮುನಿಗಳನ್ನು ಉಪಚರಿಸುವ ರೀತಿ, ದಾನದಿಂದ ಬರುವ ಫಲ, ಆಚರಿಸಬೇಕಾದ ವ್ರತಗಳು, ಪತಿಸೇವೆ-ಮೊದಲಾದುವುಗಳ ಬಗೆಗಳ ವಿವರಣೆಯಿದೆ.

ಒಟ್ಟಿನಲ್ಲಿ ಸ್ತ್ರೀಯರು ದೈನಂದಿನ ಕೆಲಸಕಾರ್ಯಗಳಲ್ಲಿ ವಹಿಸಬೇಕಾದ ಎಚ್ಚರಿಕೆ, ಆ ಕಾರ್ಯಗಳಲ್ಲಿ ಒದಗಿಬರುವ ಅಡ್ಡಿ ಆತಂಕಗಳ ನಿವಾರಣೆ, ಉತ್ತಮ ಮಾರ್ಗಗಳಿಂದ ಮುಕ್ತ ಜೀವಿಗಳಾಗುವುದು ಎಂಬುದೆಲ್ಲವನ್ನೂ ಸರಳವಾಗಿ ಮನಮುಟ್ಟು ವಂತೆ ನಿರೂಪಿಸಿರುವುದು ಮೆಚ್ಚಿನದಾಗಿದೆ.

ಈ ನಿರೂಪಣೆಗೆ ಉಳಿದ ಎರಡು ಕಾವ್ಯಗಳಂತೆ ಸರಳ ನಿರೂಪಣೆಗೆ ಸಹಕಾರಿಯಾಗಿ ದೇಸೀಪದಗಳನ್ನೇ ಹೆಚ್ಚಾಗಿ ಬಳಸಿರುವುದನ್ನು ಕಾಣಬಹುದು. ಇದಕ್ಕೆ ಸಹಕಾರಿಯಾಗಿ

'ಕಾಂತಾರದ ಕರಡು ಕಿಚ್ಚಿನೊಳಗಾದವೊಲಂ' (೩೬)
ಊರುಂಬ ಬಾವಿಗಿಂದಂ ಆರೊಬ್ಬರು ಬಳಸದಿರ್ದ
ಬಾವಿಯ ನೀರುಂ ಹೇರಾಳವಹುದೆ (೧೫೦)
ಕೀಟಿಂ ಸುರೆಯ ಪ್ರಿಯವಾಗಿ ಕುಡಿವವರವೊಲಂ (೧೬೬)

ಮೊದಲಾದ ಉಪಮೆಗಳನ್ನು ಬಳಸಿಕೊಳ್ಳಲಾಗಿದೆ.

ಹೀಗೆ ಉಳಿದ ಕೃತಿಗಳಂತೆ ಇಲ್ಲಿಯೂ ಬಂಧುವರ್ಮನು ಜೈನತತ್ತ್ವದ ಒಂದು ಮುಖವನ್ನು ಶ್ರಾವಕಿಯರಿಗೇ ಮೀಸಲಾಗಿರಿಸಿ ಅದರಲ್ಲಿ ತನ್ನ ವಿಶಿಷ್ಟತೆಯನ್ನು ಮೆರೆದಿದ್ದಾನೆ.

## ಪಾತ್ರ ಚಿತ್ರಣ

ಬಂಧುವರ್ಮ ರಚಿಸಿರುವ ಮೂರು ಕೃತಿಗಳಲ್ಲಿ ಎರಡರಲ್ಲಿ ಮಾತ್ರ ಪಾತ್ರಚಿತ್ರಣವನ್ನು ನೋಡಬಹುದು. ಇವುಗಳಲ್ಲಿ ಹೆಚ್ಚು ವೈವಿಧ್ಯಮಯವಾದ ಪಾತ್ರಗಳನ್ನೊಳಗೊಂಡ ಕೃತಿಯೆಂದರೆ ಹರಿವಂಶಾಭ್ಯುದಯ.

ಹರಿವಂಶವು ನೇಮಿನಾಥನ ಕಥೆಯನ್ನೊಳಗೊಂಡುದರಿಂದ ನೇಮಿನಾಥನೇ ಪ್ರಧಾನಪಾತ್ರವಾಗಬೇಕಾಗಿದ್ದಿತು. ಆದರೆ ಧಾರ್ಮಿಕ ವ್ಯಕ್ತಿಯ ಜೀವನ ಕೆಲವು ಕಟ್ಟುಪಾಡುಗಳಿಂದ ಸೀಮಿತಗೊಂಡಿರುವುದರಿಂದಲೊ ಏನೊ ಉಳಿದ ಪಾತ್ರಗಳೇ ಪ್ರಧಾನ ಸ್ಥಾನವನ್ನು ಪಡೆದುಕೊಂಡಿವೆ. ಕಾವ್ಯಧರ್ಮ ಧರ್ಮ ಎರಡನ್ನೂ ಹೇಳ ಹೊರಟ ಇವರಿಗೆ ಪ್ರಧಾನ ಕಥೆಗೆ ಪೋಷಕವಾಗಿ ಇತರ ಕಥೆಗಳೂ ವರ್ಣನೆಗಳೂ ಆವಶ್ಯಕವಾದವು. ಆದುದರಿಂದಲೇ ಕಾವ್ಯಕಥೆಗೆ ಅನವಶ್ಯಕವಾಗಿದ್ದ ಚಾರುದತ್ತ ಪ್ರಕರಣವನ್ನು ಇಲ್ಲಿ ತಂದು ಅದನ್ನು ಇಡೀ ಕಾವ್ಯದಲ್ಲಿಯೇ ಅತ್ಯಂತ ಉತ್ತಮ ರಸಸನ್ನಿವೇಶವನ್ನಾಗಿ ಚಿತ್ರಿಸಲಾಗಿದೆ.

### ವಸುದೇವ :

ಕಾವ್ಯದ ಮೊದಲಲ್ಲಿಯೇ ಬರುವ ವಸುದೇವನ ಚಿತ್ರ ಅತ್ಯಂತ ಸುಂದರವಾಗಿದೆ. ಈತನು ಅಕ್ಷರಾದಿ ಚತುಃಷಷ್ಟಿ ಕಳಾಪರಿಣತ, ಪರಾಕ್ರಮಿ, ಪರಿಪೂರ್ಣಯವ್ವನನಾದ ಈತನು ವಿವಿಧ ಪೋಷಾಕುಗಳನ್ನು ಧರಿಸಿ ಹೊರಹೊರಟರೆ ಪಟ್ಟಣದ ಸ್ತ್ರೀಯರು ಈತನಿಗೆ ಮರುಳಾಗುತ್ತಿದ್ದರು. ಅವರು ತಮ್ಮ ಗಂಡಂದಿರು ಮತ್ತು ಮಕ್ಕಳನ್ನೇ ಮರೆಯುತ್ತಿದ್ದರು. ಹೀಗೆ ಮರುಳಾದ ಸ್ತ್ರೀಯರನ್ನು ಅಂಕೆಗೊಳಪಡಿಸಲಾರದ ಪುರುಷರು

ವಸುದೇವನ ಅಣ್ಣ ಹಾಗೂ ಪುರದ ರಾಜನಾದ ಸಮುದ್ರ ವಿಜಯನಲ್ಲಿ ತನ್ನ ಅಸಹಾಯಕ ಸ್ಥಿತಿಯನ್ನು ತೋಡಿಕೊಂಡನು. ಪುರಜನರ ಪ್ರೀತಿಗೆ ಪಾತ್ರನಾದ ಸಮುದ್ರವಿಜಯನು ತಮ್ಮನನ್ನು ಉಪಾಯದಿಂದ ಅಂಕೆಗೊಳಪಡಿಸಿ ಪಟ್ಟಣದಲ್ಲೆಲ್ಲಿಯೂ ತಿರುಗ ದಂತಿರಿಸಿದನು. ಇದನ್ನರಿತ ವಸುದೇವನಿಗೆ ವ್ಯಥೆಯಾಯಿತು. ಈ ಯಾವುದಕ್ಕೂ ತಾನು ಹೊಣೆಗಾರನಾಗದಿದ್ದರೂ ತನ್ನನ್ನು ಇಂತಹ ಕಟ್ಟುಪಾಡುಗಳಿಗೊಳಪಡಿಸಿದುದರಿಂದ ನೊಂದ ಆತನು ಪಟ್ಟಣವನ್ನೇ ತ್ಯಜಿಸಿದನು.

ದೇಶತ್ಯಾಗ ಮಾಡಿದ ವಸುದೇವನು ತನ್ನ ಕಲಾಪ್ರೌಢಿಮೆ ಯಿಂದ ವಿಜಯಿ, ಜಯಸೇನೆಯರನ್ನು ವರಿಸಿ ಅರ್ಧರಾಜ್ಯವನ್ನೇ ಪಡೆದನು. ಆದರೂ ಈ ಸುಖಕ್ಕೆ ಮರುಳಾಗದೆ ತನ್ನಲ್ಲಿನ ಅಗಾಧ ಪೌರುಷದಿಂದ ಉತ್ತಮ ಕೆಲಸಗಳನ್ನು ಮಾಡಿ ತೋರಿಸ ಬೇಕೆಂಬ ಹಂಬಲದಿಂದ ಮುಂದುವರಿದನು. ಹೀಗೆ ಕೈಹಿಡಿದ ಹೆಂಡಿರನ್ನು ಬಿಟ್ಟುಹೋಗುವುದು ಸಾಮಾನ್ಯರಿಗೆ ಸಾಧುವಲ್ಲ ವೆನಿಸಿದರೂ ಅಂದಿನ ಕಾಲಕ್ಕೆ ಅಸಾಧಾರಣ ಪುರುಷರು ಹಾಗೆ ಒಂದೆಡೆ ಕುಳಿತುಕೊಳ್ಳುವುದು ಅನುಚಿತವಾಗಿದ್ದಂತೆ ತೋರು ತ್ತದೆ. ಮುಂದೆ ವಸುದೇವನು ಭದ್ರಗಜವೊಂದನ್ನು ಸೋಲಿಸಿ ಶೌರ್ಯಪ್ರದರ್ಶನ ಮಾಡಿ ಶಾಲ್ಮಲಿದತ್ತೆಯನ್ನು ವರಿಸುವುದು ಆತನ ಅಸೀಮ ಪರಾಕ್ರಮವನ್ನು ಸೂಚಿಸುವಂತೆ, ವೀಣಾ ವಾದನದಲ್ಲಿ ಪ್ರೌಢಿಮೆಯನ್ನು ತೋರಿ ಗಾಂಧರ್ವದತ್ತೆಯ ಕೈ ಹಿಡಿಯುವುದು ಅವನ ಕಲಾನೈಪುಣ್ಯತೆಯನ್ನು ತೋರಿಸುತ್ತದೆ.

ಒಟ್ಟಿನಲ್ಲಿ ವಸುದೇವ ಅಸಾಧಾರಣ ವ್ಯಕ್ತಿಯಾಗಿ ಕಂಗೊಳಿ ಸಿದ್ದಾನೆ. ಅವನ ರೂಪು ಲಾವಣ್ಯಗಳು ಅತಿಶಯವಾಗಿರು ವಂತೆಯೇ ಅಸ್ತ್ರಶಸ್ತ್ರವಿದ್ಯೆಗಳಲ್ಲಿ, ಕಲಾನೈಪುಣ್ಯತೆಯಲ್ಲಿ

ಅದ್ವಿತೀಯನಾಗಿದ್ದಾನೆ. ತನ್ನೆದುರು ಯುದ್ಧಮಾಡುತ್ತಿರುವವನು ಅಣ್ಣನೆಂದು ಅರಿತಕೂಡಲೆ 'ಪಿರಿಯಣ್ಣನೊಳವಿಜಿವಂತಾಯ್ತೆ ಪಾಪವೆನಗೆ' (೫–೨೧) ಎಂದು ಬಗೆದು ಆತನ ಅಡಿದಾವರೆಗಳಲ್ಲಿ ಬೀಳುವ ವಸುದೇವನ ಗುಣ ಮೆಚ್ಚುವಂತಹುದು.

**ಚಾರುದತ್ತ :**

ಚಾರುದತ್ತ ಆಗರ್ಭ ಶ್ರೀಮಂತರ ಮಗನಾಗಿ ಹುಟ್ಟಿದವನು. ಈತನು ಆದರ್ಶ ವಿದ್ಯಾರ್ಥಿಯಾಗಿ ಚತುಃಷಷ್ಟಿಕಳಾಪರಿಣತನಾಗಿ ಮೆರೆದವನು. ಮದುವೆಯಾದರೂ ಕೈಹಿಡಿದ ಹೆಂಡತಿಯನ್ನು ಕಡೆಗಣಿಸಿ ಶಾಸ್ತ್ರಾಭ್ಯಾಸದಲ್ಲಿಯೇ ತಲ್ಲೀನನಾಗಿ 'ಅರೆಮರುಳ' ಪಟ್ಟವನ್ನು ಪಡೆದವನು. ವಿದ್ಯಾರ್ಜನೆಯತ್ತಲೆ ಮನಸ್ಸನ್ನು ನೆಲೆಗೊಳಿಸಿದ್ದ ಒಬ್ಬ ಅಸಾಧಾರಣ ವ್ಯಕ್ತಿ ಸಹವಾಸ ದೋಷದಿಂದ ಎಂತಹ ಹೀನಸ್ಥಿತಿಗೆ ಬರುತ್ತಾನೆನ್ನುವುದನ್ನು ಈ ಪಾತ್ರದಲ್ಲಿ ಕಾಣಬಹುದು. ಮದುವೆಯಾದ ಮಿತ್ರಾವತಿಯನ್ನು ಬಿಟ್ಟು ಕೈಹಿಡಿದು ಎಳೆದೊಯ್ದ ವೇಶ್ಯೆ ವಸಂತತಿಲಕೆಯಲ್ಲಿ ಅನುರಕ್ತನಾಗಿ, ಬೆಲೆವೆಣ್ಣೊಬ್ಬಳಿಂದ ಬಿಡಿಸಿಕೊಳ್ಳಲಾರದೆ ಅಸಹಾಯಕನಾಗಿ ಉಳಿಯುವುದು ಅನುಚಿತವಾಗಿ ತೋರುತ್ತದೆ. ತಾಯಿಯು ಇದನ್ನು ಸಹಿಸಿಕೊಂಡು ಆತನಿಗೆ ಬೇಕಾದ ಹಣವನ್ನು ಕಳುಹಿಸಿಕೊಡುವುದು ಅತ್ಯಂತ ವಿಚಿತ್ರವಾಗಿ ತೋರಿದರೂ ಅಂದಿನ ರೀತಿನೀತಿಗಳು ಇದಕ್ಕೆ ಸಹಕಾರಿಯಾಗಿದ್ದಿರಬಹುದು.

ಕೊನೆಗೆ ನಿರ್ದ್ರವ್ಯನಾದ ಈತನನ್ನು ಕೂಂಟಣಿ ಹೊರದೂಡಿದ ಮೇಲೆಯೇ ಈತ ಎಚ್ಚೆತ್ತುಗೊಳ್ಳುವುದು. ಕೊನೆಗೂ

ಸ್ವಸಾಮರ್ಥ್ಯದಿಂದ ಎದುರಾದ ಎಡರು ತೊಡರುಗಳನ್ನು ನಿಭಾಯಿಸಿ, ಹಿಡಿದ ಕೆಲಸದಿಂದ ವಿಚಲಿತನಾಗದೆ ಮುಂದುವರಿಯುವ ಈತನ ಸಾಹಸ ಮೆಚ್ಚುವಂತಹುದು. ಈತನು ಅಸೀಮ ಮನೋದಾರ್ಢ್ಯದಿಂದಲೇ ಮನಸ್ಸಿನ ಆಸೆಯನ್ನು ಈಡೇರಿಸಿ ಕೊಳ್ಳುತ್ತಾನೆ; ಸಕಲ ಸೌಭಾಗ್ಯಗಳಿಂದ ಬದುಕುವ ಮಟ್ಟವನ್ನು ಮುಟ್ಟುತ್ತಾನೆ.

**ಕೃಷ್ಣ :**

ಇಲ್ಲಿನ ಮುಖ್ಯ ಪಾತ್ರಗಳಲ್ಲಿ ವಸುದೇವ ದೇವಕಿಯರ ಪುತ್ರನಾದ ಕೃಷ್ಣನದೂ ಒಂದಾಗಿದೆ. ಈತನು ಕಂಸನ ವಿರೋಧಿ. ಹುಟ್ಟಿದಂದಿನಿಂದಲೇ ದೇವತೆಗಳ ನೆರವನ್ನು ಪಡೆದ ಈತನನ್ನು ಕಂಸನ ವಧೆಯಿಂದ ತಪ್ಪಿಸಲು ಕೊಂಡೊಯ್ಯುವಾಗ ಬಾಗಿಲು ತೆರೆದು ಅಣಿಮಾಡಿಕೊಟ್ಟವಳು ನಗರದೇವತೆ; ಬೆಳಕನ್ನು ನೀಡಿದುದು ಧವಳ ವೃಷಭೇಶ್ವರ ; ದಾರಿಗಡ್ಡಲಾಗಿ ಬಂದ ಕಾಳಿಂದಿನದಿಯು ಇಬ್ಭಾಗವಾಗಿ ದಾರಿಮಾಡಿಕೊಡುತ್ತದೆ. ಇದೆಲ್ಲವೂ ದೈವಬಲದಿಂದಲ್ಲದೆ ಬೇರೆಯಲ್ಲ. ನಂದಗೋಕುಲದಲ್ಲಿ ಬೆಳೆಯುತ್ತಿದ್ದ ಕೃಷ್ಣನನ್ನು ಕೊಲ್ಲಲು ಹೋದ ಕಂಸನ ದೇವತೆಗಳು ಸೋತು ಹಿಂದಿರುಗಿದರು. ಕೊನೆಗೆ ಚಾಣೂರನೇ ಕೃಷ್ಣನ ಮೇಲೇರಿ ಬಂದು ಹತನಾದನು.

ಕೃಷ್ಣನು ಅದ್ಭುತ ಕಾರ್ಯಗಳ ಸಾಧನೆಯಿಂದ ವಿದ್ಯಾಧರ ರಾಜನ ಮಗಳಾದ ಸತ್ಯಭಾಮೆಯನ್ನು ವರಿಸಿದನು. ಅಸಹಾಯ ಶೂರನಾದ ಈತನು ತನ್ನ ತಂದೆ ಉಗ್ರಸೇನನನ್ನು ಸೆರೆಯಲ್ಲಿಟ್ಟಿದ್ದ ಕಂಸನನ್ನು ಕೊಂದು ತಂದೆಯನ್ನು ಬಿಡಿಸಿದನು. ಜರಾಸಂಧನ ವೈರವನ್ನು ಹೊಂದಿದ ಕೃಷ್ಣನಿಗಾಗಿ ಇಂದ್ರನು ದ್ವಾರಾವತಿ

ಯನ್ನು ನಿರ್ಮಾಣ ಮಾಡಿಕೊಟ್ಟನು. ಹೀಗೆ ಉನ್ನತ ಸ್ಥಿತಿಗೇರಿದ ಕೃಷ್ಣನು ಶಿಶುಪಾಲನನ್ನು ಕೊಂದು ಆತನ ಮಗಳಾದ ರುಗ್ಮಿಣಿಯನ್ನು ಮದುವೆಯಾದನು.

ಹೀಗೆ ಸುಖವಾಗಿದ್ದರೂ ಆತನು ನಾರದನನ್ನು "ಸ್ತ್ರೀರತ್ನಮುಳ್ಳೆಡೆಯನಱಿದುಬಂದೊಡೆ ಪೇೞಿಂ" (೧೧-೬೪ವ) ಎಂದು ಹೇಳುವುದು ತೀರಾ ಅನುಚಿತವಾಗಿ ತೋರುತ್ತದೆ. ಆದರೆ ಹಲವಾರು ಸ್ತ್ರೀಯರನ್ನು ಒಬ್ಬನೇ ವರಿಸುವುದು ರಾಜರಿಗೆ ಸಂಪ್ರದಾಯವಾಗಿರುತ್ತಿದ್ದುದರಿಂದ ಇದರಲ್ಲಿ ವಿಶೇಷತೆಯೇನೂ ಕಂಡು ಬರುವುದಿಲ್ಲ. ನೇಮಿಯು ತನಗಿಂತ ಅಧಿಕ ಸಾಹಸಿಯೆಂಬುದನ್ನರಿಯುತ್ತಿದ್ದಂತೆಯೇ ಆತನನ್ನು ರಾಜ್ಯಮೋಹದಿಂದ ವಿಮುಖನನ್ನಾಗಿ ಮಾಡುವ ಸಂಚು ಕೃಷ್ಣನ ರಾಜ್ಯಮೋಹಕ್ಕೆ ಸಾಕ್ಷಿಯಾಗಿದೆ. ಈ ಸಂಚಿನಂತೆ ನೇಮಿಗೆ ವಿವಾಹದ ಏರ್ಪಾಡು ಮಾಡಿ, ಔತಣಕ್ಕೆಂದು ಪಶುಗಳನ್ನು ಕೊಟ್ಟಿಗೆಯಲ್ಲಿ ಕೂಡಿ ತೋರಿಸಿ ನೇಮಿಯನ್ನು ವಂಚಿಸುವ ಚಿತ್ರ ಕೃಷ್ಣನ ವ್ಯಕ್ತಿತ್ವವನ್ನು ಅಧೋಗತಿಗಿಳಿಸುತ್ತದೆ. ಕೃಷ್ಣನು ಇಷ್ಟನ್ನೂ ಮಾಡಿದುದು ಸ್ವಾರ್ಥಕ್ಕಾಗಿ ಎಂಬುದು ನಿಚ್ಚಳವಾಗಿದೆ. ಇದರಿಂದ ನೇಮಿಗೆ ಉತ್ತಮಸ್ಥಾನ ದೊರೆಕೊಂಡುದೇನೋ ಸರಿ. ಅದನ್ನೇ ಕೃಷ್ಣನ ಉದ್ದೇಶವಾಗಿಟ್ಟಿದ್ದರೆ ಕೃಷ್ಣನ ಹಿರಿಮೆ ಹೆಚ್ಚುತ್ತಿದ್ದಿತು. ಇಷ್ಟೆಲ್ಲಾ ಮಾಡಿದ ಕೃಷ್ಣನು ಕೊನೆಗೆ ರಾಜ್ಯವನ್ನು ತೊರೆದು ಕಾಡಿನಲ್ಲಿ ಅಲೆಯುತ್ತಾ ಜರತ್ಕುಮಾರನೆಂಬ ಬೇಡನ ಬಾಣಕ್ಕೆ ತುತ್ತಾಗಬೇಕಾಯಿತು.

**ನೇಮಿನಾಥ :**

ಇದು ನೇಮಿನಾಥ ಪುರಾಣವಾದುದರಿಂದ ನೇಮಿನಾಥನೇ

ಪ್ರಧಾನ ಪಾತ್ರವಾಗಬೇಕಾಗಿದ್ದಿತು. ಆದರೆ ಈ ಮೊದಲೇ ತಿಳಿಸಿರುವಂತೆ ಕಾವ್ಯಧರ್ಮ ಧರ್ಮ ಎರಡನ್ನೂ ಒಟ್ಟಿಗೆ ಹೇಳ ಹೊರಟ ಕವಿಯು ಕಥಾ ಚೌಕಟ್ಟಿನಲ್ಲಿ ಇನ್ನೂ ಹಲವು ಪಾತ್ರ ಗಳನ್ನು ಅಳವಡಿಸಿದ್ದಾನೆ. ಹಾಗೆ ಮಾಡುವಾಗ ಇಲ್ಲಿನ ಮೂಲ ಪಾತ್ರ ಕಿರಿದಾಗಿ ಕಂಡುಬರುತ್ತದೆ. ಇದು ಕಾವ್ಯದ ಮೂರು ಆಶ್ವಾಸಗಳಲ್ಲಿ ಮಾತ್ರ ಅಲ್ಲಲ್ಲಿಯೇ ಬಂದಿದ್ದು ಮುಖ್ಯಪಾತ್ರವಲ್ಲ ವೆಂದೇ ಓದುಗರಿಗೆ ತೋರುತ್ತದೆ.

ನೇಮಿಯ ಜನನಿ ಶುಭಸ್ವಪ್ನಗಳನ್ನು ಕಾಣುವುದು, ಆಕೆಯ ಆರೈಕೆಗೆ ದೇವಿಯರ ನೇಮಕ ಮೊದಲಾದುವು ಜೈನ ಸಂಪ್ರದಾಯಕ್ಕನುಸಾರವಾಗಿ ಚಿತ್ರಿತವಾಗಿವೆ. ದೇವತೆಗಳಿಂದ ಜನ್ಮಾಭಿಷೇಕ ಹೊಂದಿದ ನೇಮಿಯು ಅಲೌಕಿಕ ವ್ಯಕ್ತಿಯಾಗಿ ಕಂಗೊಳಿಸುತ್ತಾನೆ. ಆತನು ತನ್ನ ಅನೇಕ ಪೂರ್ವಭವಗಳ ಪುಣ್ಯಪರಿಪಾಕದಿಂದ ಅವತರಿಸಿದ್ದಾನೆ. ' ನೇಮಿಯು ತಾನು ಎಂದೂ ಹೆಚ್ಚಿನವನು ಎಂಬುದನ್ನು ತೋರಿಸಿಕೊಂಡವನಲ್ಲ. ಜಲಕ್ರೀಡಾಸಮಯದಲ್ಲಿ ತಾನಾಗಿ ಒದಗಿಬಂದ ಸಂದರ್ಭದಲ್ಲಿ ನೇಮಿಯು ಕಿರುಕುಣಿಕೆಯನ್ನು ಬಗ್ಗಿಸದಾದ ಕೃಷ್ಣನಿಗೆ ಈತನ ಶಕ್ತಿಯ ಬಗೆಗೆ ಕಳವಳವುಂಟಾಗುತ್ತದೆ. ತಾನು ರಾಜನಾಗುವ ಆಸೆಯನ್ನು ಹೊಂದಿದ್ದ ಕೃಷ್ಣನು ನೇಮಿಯನ್ನು ರಾಜ್ಯವಿಮೋಹ ವಾಗುವಂತಹ ಉಪಾಯವನ್ನು ಹೂಡಿ ಆತನ ವೈರಾಗ್ಯಕ್ಕೆ ಕಾರಣನಾಗುತ್ತಾನೆ. ಯಾವುದೇ ಒಂದು ಸಣ್ಣ ಕಾರಣ ಉತ್ತಮ ಕಾರ್ಯಕ್ಕೆ ಹಿನ್ನೆಲೆಯಾಗುವಂತೆ ಈ ಸಣ್ಣ ಕಾರಣವೇ ನೇಮಿಯು ಕೇವಲಜ್ಞಾನಿಯಾಗಿ ನಿರ್ವೃತಿಶ್ರೀಗೆ ಒಡೆಯ ನಾಗಲು ಸಹಕಾರಿಯಾಗುತ್ತದೆ.

## ಸಮುದ್ರ ವಿಜಯ :

ವಸುದೇವನ ಅಣ್ಣನಾದ ಸಮುದ್ರವಿಜಯ ಮಹಾರಾಜ ಸಾತ್ವಿಕ ವ್ಯಕ್ತಿ. ಆದುದರಿಂದಲೇ ತಮ್ಮನ ಮೇಲೆ ದೂರುತಂದ ಪುರಜನರನ್ನು ಸಮಾಧಾನಪಡಿಸಿ, ತಮ್ಮನನ್ನು ಉಪಾಯದಿಂದ ಅಂಕೆಗೊಳಪಡಿಸುತ್ತಾನೆ. ತಮ್ಮ ವಸುದೇವನು ಸತ್ತನೆಂಬ ಸುದ್ದಿಯನ್ನು ತಿಳಿದಾಕ್ಷಣವೇ ಮೂರ್ಛೆಹೋಗುವ ತಮ್ಮನ ಮೇಲಣ ಈತನ ಪ್ರೀತಿ ಬಲು ಹೆಚ್ಚಿನದು. ತಮ್ಮನ ಅಗಲಿಕೆಗಾಗಿ ದುಃಖಗೊಂಡು ಹಲುಬುವ ಚಿತ್ರ ಸಮುದ್ರವಿಜಯನ ವ್ಯಕ್ತಿತ್ವವನ್ನು ಉನ್ನತಮಟ್ಟಕ್ಕೆ ಕೊಂಡೊಯ್ಯುತ್ತದೆ. ಈ ಪಾತ್ರ ಇಲ್ಲಿ ಚಿಕ್ಕದಾಗಿ ಬಂದರೂ ಸಹೃದಯರನ್ನು ಆಕರ್ಷಿಸುವ ಉತ್ತಮ ಪಾತ್ರವಾಗಿದೆ.

## ಪ್ರದ್ಯುಮ್ನ :

ಪ್ರದ್ಯುಮ್ನನದು ಒಂದು ಅಸಾಧಾರಣ ವ್ಯಕ್ತಿತ್ವ. ಪುರಾಣವನ್ನು ಕಾವ್ಯಮಯವನ್ನಾಗಿ ಮಾಡುವ ಉದ್ದೇಶದಿಂದ ಈತನ ಪಾತ್ರ ಹೆಚ್ಚು ಗರಿಗಟ್ಟಿ ನಿಂತಿದೆ. ಹುಟ್ಟುತ್ತಿದ್ದಂತೆಯೇ ತಂದೆ ತಾಯಿಯರ ಪ್ರೀತಿಯಿಂದ ವಂಚಿತನಾದ ಈತನು ಕಾಂಚನ ಮಾಲೆಯೆಂಬ ಸಾಕುತಾಯಿಯ ಆಸರೆ ಪಡೆಯುತ್ತಾನೆ. ಯೌವನಸ್ಥನಾದ ಮೇಲೆ ಸಾಕುತಾಯಿಯು ತನ್ನ ಕೂಟವನ್ನು ಬಯಸಿದಾಗ ಆಕೆಗೆ ಬುದ್ಧಿ ಹೇಳುತ್ತಾನೆ. ಆದರೆ ಈ ಬುದ್ಧಿವಾದವಾವುದರಿಂದಲೂ ಆಕೆ ಮಣಿಯದಾದಾಗ ಆಕೆಯ ಬಯಕೆಯನ್ನು ತಿರಸ್ಕರಿಸಿ ದಂಡನೆಗೊಳಗಾಗುತ್ತಾನೆ. ಇದರಲ್ಲಿ ತಾನು ಜಯಶೀಲನಾಗುತ್ತಾನೆ. ತಾಯಿಯೊಡನೆ ನಡೆದುಕೊಂಡ ರೀತಿ, ಆಡುವ ಮಾತುಗಳು ಆದರ್ಶ ಮಗನ ಚಿತ್ರವನ್ನು ನೀಡುತ್ತವೆ.

ಅದ್ಭುತ ಕಾರ್ಯಗಳಲ್ಲಿ ಪಳಗಿದವನಾದ ಪ್ರದ್ಯುಮ್ನನು ವೃದ್ಧನಾವಿದನಾಗಿ ಹೋಗಿ ದುರ್ಯೋಧನನ ಮಗಳಾದ ಉದಧಿಯನ್ನು ಕೊಂಡೊಯ್ದು ಮದುವೆಯಾಗುತ್ತಾನೆ. ಕಿರಾತ ವೇಷದಿಂದ ಕುರುಸೇನೆಯನ್ನು ಅಡ್ಡಗಟ್ಟಿ ತನ್ನ ಪ್ರತಾಪವನ್ನು ಪ್ರದರ್ಶಿಸುತ್ತಾನೆ. ಈತನು ಉತ್ತಮ ನಡವಳಿಕೆಯ, ಅನನ್ಯ ಸಾಹಸದ ಸಾಕಾರ ಮೂರ್ತಿಯಾಗಿದ್ದಾನೆ. ಎಲ್ಲ ಕೆಲಸಗಳಲ್ಲಿಯೂ ಜಯಶೀಲನಾಗಿ ಮುಂದುವರಿಯುವ ಈತನು ಉನ್ನತ ಸ್ಥಿತಿಗೇರಿದಾಗಲೆ ವೈರಾಗ್ಯವನ್ನು ಹೊಂದಿ ನೇಮಿಭಟ್ಟಾರರ ಸಮವಸರಣದಲ್ಲಿ ದೀಕ್ಷೆಗೊಳ್ಳುತ್ತಾನೆ.

ಉಳಿದ ಪುರುಷಪಾತ್ರಗಳಲ್ಲಿ ಬಲರಾಮ, ಕಂಸ, ಜರಾಸಂಧ–ಮೊದಲಾದ ಪಾತ್ರಗಳು ಕಥಾನುಸರಣೆಗೆ ಅನುಸಾರವಾಗಿ ಬರುವುವೇ ಹೊರತು ಇವುಗಳಲ್ಲಿ ಅಂತಹ ವಿಶೇಷತೆಯೇನೂ ಕಂಡುಬರುವುದಿಲ್ಲ. ಸ್ತ್ರೀಪಾತ್ರಗಳೆಲ್ಲವೂ ಅಪ್ರಧಾನವಾದುವಾದರೂ ದೇವಿಲೆ, ಮಿತ್ರಾವತಿ, ಕಾಂಚನಮಾಲೆಯರ ಪಾತ್ರಗಳನ್ನು ಗಮನಿಸಬಹುದು.

### ದೇವಿಲೆ :

ಚಾರುದತ್ತನ ತಾಯಿ ದೇವಿಲೆ ಆಗರ್ಭ ಶ್ರೀಮಂತೆ, ಸಾಧ್ವೀಮಣಿ. ತನಗೆ ಬಹಳ ಕಾಲ ಮಕ್ಕಳಿಲ್ಲದೆ ಚಾರುಗಳ ಆದೇಶದಿಂದ ಪಡೆದ ಮಗನಿಗೆ ಮದುವೆ ಮಾಡಿದಳು. ಮದುವೆಯಾದ ಮಗ ಶಾಸ್ತ್ರಾಭ್ಯಾಸದಲ್ಲಿಯೇ ತಲ್ಲೀನನಾಗಿದ್ದುದರಿಂದ ಬೀಗತಿಯ ಭರ್ತ್ಸನೆಗೆ ಒಳಗಾದಳು. ಇದರಿಂದ ಚಿಂತಿತಳಾದ ಆಕೆಯು ಮಗನನ್ನು ದಾರಿಗೆ ತರಬೇಕೆಂದು ಯೋಚಿಸಿ ಅದಕ್ಕಾಗಿ ಒಬ್ಬನನ್ನು ಜೊತೆಗೂಡಿಸಿದಳು. ಒಳ್ಳೆಯ ಉದ್ದೇಶದಿಂದ

ಮಾಡಿದ ಈ ಕಾರ್ಯದಿಂದ ಮಗ ವೇಶ್ಯೆಯಲ್ಲಿಯೇ ಸೇರಿ ಹೋಗುವಂತಾಯಿತು. ಇದರಿಂದ ಈಕೆಯ ಪತಿ ತಪಸ್ಸಿಗೆ ತೆರಳಿದನು. ದೇವಿಲೆ ಮಾತ್ರ ತನ್ನ ಮಗನ ಖರ್ಚಿಗೆ ಬೇಕಾದ ಹಣವನ್ನು ಕಳುಹಿಸುತ್ತಲೇ ಇದ್ದುದು, ಅದೂ ಹನ್ನೆರಡು ವರ್ಷದ ವರೆಗೆ ವಿಚಿತ್ರವಾಗಿ ತೋರುತ್ತದೆ. ಆದರೆ ಮಗನ ಸೌಖ್ಯ ವೊಂದನ್ನೇ ಬಯಸಿದ ತಾಯಿಗೆ ಬೇರೆ ದಾರಿಯೇ ಕಾಣದಾಗಿರ ಬೇಕು. ಅಲ್ಲದೆ ಮಗನ ಸಾಮರ್ಥ್ಯದ ಬಗೆಗೆ ಅಪಾರ ನಂಬುಗೆ ಯನ್ನು ಹೊಂದಿದ್ದ ಆಕೆಯು ಎಂದಾದರೂ ತನ್ನ ಮಗ ಉನ್ನತ ಸ್ಥಿತಿಗೆ ಬಂದೇಬರುತ್ತಾನೆಂಬ ಆಸೆಯನ್ನು ಹೊಂದಿರಬಹುದು. ಅದಕ್ಕೆ ಯಾವ ಗುರುತುಗಳೂ ಇಲ್ಲಿ ಸಿಕ್ಕದಿದ್ದರೂ ಆ ಆಸೆ ಈಡೇರಿದುದನ್ನು ನಾವು ಕಾಣಬಹುದು.

**ಮಿತ್ರಾವತಿ :**

ದೇವಿಲೆಯ ಸೊಸೆ ಮತ್ತು ಚಾರುದತ್ತನ ಹೆಂಡತಿ ಮಿತ್ರಾ ವತಿಯದು ಮುಗ್ಧ ಹೆಣ್ಣುಮಗಳ ಪಾತ್ರವಾಗಿದೆ. ಮದುವೆ ಯಾಗಿ ಗಂಡನೊಡನೆ ಸುಖವಾಗಿ ಕಾಲ ಕಳೆಯಬೇಕೆಂಬ ಬಯಕೆ ಈಡೇರದಾದಾಗ ಸಹಜವಾಗಿ ಬೇಸರಗೊಳ್ಳುತ್ತಾಳೆ. ರೂಪು ವಿದ್ಯೆಗಳಲ್ಲಿ ಬೇರೊಬ್ಬರು ಸರಿಸಮಾನರಲ್ಲದಂತಹ ಪತಿ ಯನ್ನು ಪಡೆದೂ ಸುಖದಿಂದ ವಂಚಿತಳಾದ ಆಕೆಯು ಮತ್ತೂ ಹನ್ನೆರಡು ವರುಷ ಆತನು ವೇಶ್ಯೆಯ ಮನೆಯನ್ನು ಸೇರಿದಾಗ ಆಕೆಗಾದ ನೋವೆಷ್ಟೆಂಬುದನ್ನು ಕವಿ ಇಲ್ಲಿ ಯಾವ ವಿಧವಾಗಿಯೂ ಸೂಚಿಸಿರುವುದಿಲ್ಲ. ಮತ್ತೆ ಗಂಡನ ಹಾದರಕ್ಕೆ ಬೇಕಾದ ಹಣ ವನ್ನು ಕಳುಹಿಸುವಲ್ಲಿಯೂ ಯಾವ ವಿಧವಾದ ಅಡಚಣೆಯನ್ನೂ ಒಡ್ಡುವುದಿಲ್ಲ. ಬದಲಾಗಿ ಹಣವೆಲ್ಲಾ ತೀರಿದ ಮೇಲೆ ತನ್ನ

ಒಡವೆಗಳನ್ನೇ ಬಿಚ್ಚಿ ಕೊಡುವ ಮಿತ್ರಾವತಿಯ ಬಗೆಗೆ ಕನಿಕರ ಮೂಡುತ್ತದೆ.

ಚಾರುದತ್ತನ ಶಾಸ್ತ್ರಾಭ್ಯಾಸದ ಒಂದೊಂದು ವಸ್ತುವೂ ಆಕೆಗೆ ಸಾಮಾನ್ಯ ಕಳಪೆ ವಸ್ತುಗಳಾಗಿ ಕಂಡುಬರುವುದು ವಿದ್ಯೆಯ ಬಗೆಗೆ ಆಕೆಗಿದ್ದ ಪರಿಜ್ಞಾನವನ್ನು ಸೂಚಿಸುವುದೊ ಇಲ್ಲವೆ ಆ ಬಗೆಗೆ ಬೇಸರಗೊಂಡ ಆಕೆ ಈ ರೀತಿ ಹೇಳುವುದೊ ಸಹೃದಯರೇ ಊಹಿಸಿಕೊಳ್ಳಬೇಕಾಗಿದೆ. ಹನ್ನೆರಡು ವರ್ಷಗಳ ಅನಂತರ ಬಂದ ಪತಿಯ ಬಗೆಗೆ ತುಂಬು ಆದರವನ್ನು ತೋರಿಸುತ್ತಾಳೆ. ಅಂದಿನ ಸಮಾಜದ ರೀತಿನೀತಿಗಳಲ್ಲಿ ಸತಿಯಾದವಳು ಎಂತೇ ಆದರೂ ತನ್ನ ಸ್ತ್ರೀಧರ್ಮದಿಂದ ವಂಚಿತಳಾಗುತ್ತಿರಲಿಲ್ಲವೆಂಬುದಕ್ಕೆ ಮಿತ್ರಾವತಿಯ ಪಾತ್ರ ಸಾಕ್ಷಿಯಾಗಿ ನಿಲ್ಲುತ್ತದೆ. ಸೂಳೆಯ ಮನೆಯನ್ನು ಸೇರಿದ್ದ ಪತಿ ಎಂದಿದ್ದರೂ ಬಂದೇ ಬರುತ್ತಾನೆಂಬುದಕ್ಕೆ ಯಾವ ಸೂಚನೆಗಳೂ ಇರುವುದಿಲ್ಲ. ಆದರೂ ಆ ಪಾತಿವ್ರತ್ಯದ, ಅತ್ತೆಯ ಚಿಂತೆಯನ್ನು ನೀಗುವ, ಗಂಡನ ಸೌಖ್ಯವನ್ನು ಬಯಸುವ ಆಕೆಯ ಮನೋಧರ್ಮ ಮೆಚ್ಚುವಂತಹುದು.

**ಕಾಂಚನಮಾಲೆ:**

ಮಿತ್ರಾವತಿಯ ಚಿತ್ರ ಒಂದು ಮುಖವಾದರೆ ಮತ್ತೊಂದು ಮುಖ ಕಾಂಚನಮಾಲೆಯದು. ಮಿತ್ರಾವತಿ ಸಾಧ್ವೀಮಣಿ ಹೇಗೊ ಹಾಗೆ ಕಾಂಚನಮಾಲೆ ದುರಾಚಾರಿಣಿ. ಮದನಜ್ವರ ಪೀಡಿತಳಾದ ಆಕೆಯು ತಾನು ಪ್ರದ್ಯುಮ್ನನ ಸಾಕಿದ ತಾಯೆಂಬುದನ್ನಾಗಲಿ, ಇದರಿಂದ ಬರುವ ಪಾಪವನ್ನಾಗಲಿ ಪರಿಗಣಿಸುವುದಿಲ್ಲ. ಕುಮಾರರಾಮನನ್ನು ಬಯಸುವ ರತ್ನಾಜಿಯಂತೆ ಸನಿ

ಹಕ್ಕೆ ಬಂದ ಮಗನನ್ನೇ ತನ್ನ ನೀಚ ಬಯಕೆಯನ್ನು ತೀರಿಸ ಬೇಕೆಂದು ಕೈ ಹಿಡಿಯುವ ತುಚ್ಛ ವ್ಯಕ್ತಿತ್ವದ ಚಿತ್ರಣ ಕಾಂಚನ ಮಾಲೆಯದು. ಮಗನಿಂದ ತನ್ನ ಬಯಕೆ ಈಡೇರದಾದಾಗ ತನ್ನ ಅಮೂಲ್ಯವಾದ . ಪ್ರಜ್ಞಪ್ತಿವಿದ್ಯೆಯನ್ನೇ ಧಾರೆಯೆರೆಯುವ ಆಮಿಷವೊಡ್ಡುತ್ತಾಳೆ. ಅದನ್ನು ಪಡೆದ ಆತನು ಆಕೆಯ ಮಗ ನಾಗಿ ಬದುಕುವೆನೆಂದು ಹೇಳಿಕೊಳ್ಳುವ ವಿನಯಪೂರ್ವಕ ಮಾತುಗಳು ಆಕೆಗೆ ಲೆಕ್ಕಕ್ಕೇ ಬಾರದಾಗುತ್ತವೆ. ಮಗನಿಂದ ತನ್ನ ಬಯಕೆ ಈಡೇರದಾದಾಗ ಕ್ರೋಧೋದ್ಧಿತಳಾದ ಆಕೆಯು ಗಂಡನಿಗೆ ಚಾಡಿ ಹೇಳಿ ಪ್ರದ್ಯುಮ್ನನನ್ನು ಕೊಲ್ಲಿಸಲು ಹವಣಿಸು ವುದು ಕಾಂಚನಮಾಲೆಯ ನೀಚ ವ್ಯಕ್ತಿತ್ವಕ್ಕೆ ಸಾಕ್ಷಿ ಯಾಗಿದೆ.

ಹರಿವಂಶಾಭ್ಯುದಯದಂತಲ್ಲದೆ ಜೀವಸಂಬೋಧನೆಯಲ್ಲಿನ ಬೇರೆ ಬೇರೆ ಕಥೆಗಳು ಅತ್ಯಂತ ಸಂಗ್ರಹವಾಗಿವೆ. ಅದರಲ್ಲಿಯೂ ಕೆಲವು ಕಥೆಗಳಂತೂ ಒಂದೆರಡು ಪದ್ಯ ವಚನಗಳಲ್ಲಿಯೇ ಮುಗಿ ಯುತ್ತವೆ. ವಸಂತತಿಲಕೆಯಲ್ಲಿನ ಕಮಳೆ, ಸುಕುಮಾರ ಕಥೆ ಯಲ್ಲಿ ಚಿತ್ರಿತನಾಗಿರುವ ಸುಕುಮಾರ, ಪಟಹಸ್ತನ ಕಥೆಯ ಪ್ರಧಾನ ಪಾತ್ರವಾದ ಪಟಹಸ್ತನೇ ಮೊದಲಾದ ಪಾತ್ರಗಳನ್ನು ಇಲ್ಲಿ ಗಮನಿಸಬಹುದು.

**ಕಮಳೆ :**

ಸಂಸಾರಾನುಪ್ರೇಕ್ಷೆಗೆದೃಷ್ಟಾಂತವಾಗಿ ನೀಡಿರುವ ವಸಂತ ತಿಲಕೆಯ ಕಥೆಯಲ್ಲಿ ಬರುವ ಕಮಳೆ ವಸಂತತಿಲಕೆಯ ಮಗಳು. ಗಣಿಕೆಯಾದ ವಸಂತತಿಲಕೆಯ ಹೊಟ್ಟೆಯಲ್ಲಿ ಹುಟ್ಟಿದರೂ ಮಗುವಾಗಿದ್ದಾಗಲೆ ಸೆಟ್ಟಿಯೊಬ್ಬನ ಕೈ ಸೇರಿದ ಈಕೆ ಒಳ್ಳೆಯ

ಮನೆತನದಲ್ಲಿ ಬೆಳೆದವಳು. ಪೂರ್ವಾರ್ಜಿತ ಕರ್ಮವಶದಿಂದ ತಿಳಿಯದೆ ಒಡಹುಟ್ಟಿದವನನ್ನೇ ಮದುವೆಯಾಗುತ್ತಾಳೆ. ಹೀಗೆ ಮದುವೆಯಾದ ಕಮಳೆಯ ಗಂಡನು ಕಮಳೆಯ ತಾಯಿಯೊಡನೆಯೇ ಕೂಡಿರುತ್ತಾನೆ. ತನ್ನ ತಾಯಿ ಮತ್ತು ಗಂಡನ ಒಡಗೂಡುವಿಕೆಯಿಂದಾದ ಮಗುವನ್ನು ಕಂಡ ಕಮಳೆ ಸಂಸಾರದ ಈ ಪಾಪಕೂಪಕ್ಕಾಗಿ ಮರುಗುತ್ತಾಳೆ. ಇದರಿಂದ ಜಿಗುಪ್ಸೆಗೊಂಡು ದೀಕ್ಷೆಯನ್ನು ವಹಿಸಿ ತಪಸ್ಸಿಗೆ ತೆರಳುತ್ತಾಳೆ.

ಕಮಳೆ ಯಾವ ಪಾಪಕರ್ಮವನ್ನೂ ಅರಿಯದವಳು. ತನ್ನ ಭವಾಂತರ ಕರ್ಮದಿಂದ ತನಗೊದಗಿದ ದುರ್ದೆಸೆಯನ್ನು ಅರಿತ ಕೂಡಲೆ ಕರ್ಮದಿಂದ ಮುಕ್ತಳಾಗಲು ಬಯಸುತ್ತಾಳೆ.

**ಸುಕುಮಾರ :**

ಲೋಕಾನುಪ್ರೇಕ್ಷೆಗೆ ನಿದರ್ಶನವಾಗಿ ಬರುವ ಸುಕುಮಾರನ ಕಥೆಯ ಪ್ರಧಾನ ಪಾತ್ರ ಸುಕುಮಾರ. ಉಜ್ಜೇನಿಪುರದ ಮಹಾ ಶ್ರೀಮಂತನಾದ ಸೂರದತ್ತ ಮತ್ತು ಯಶೋಭದ್ರೆಯರ ಮಗನಾದ ಸುಕುಮಾರನಿಗೆ ಮೂವತ್ತೆರಡು ಉತ್ತಮ ಸ್ತ್ರೀಯರು ಪತ್ನಿಯರಾಗುತ್ತಾರೆ. ಈ ಸುಕುಮಾರನ ಸೌಭಾಗ್ಯ ಅಸದಳವಾದುದು. ಸುರಲೋಕ ಸಮಾನ ಸುಖವನ್ನನುಭವಿಸುತ್ತಿದ್ದ ಈತನ ಚಿತ್ರ ಅಲೌಕಿಕವಾಗಿದೆ. ಯಶೋಭದ್ರೆಯು ಮಗನಿಗಾಗಿ ಒಂದು ಲಕ್ಷ ಹೊನ್ನು ಕೊಟ್ಟು ರತ್ನಗಂಬಳಿಯನ್ನು ಕೊಳ್ಳುವುದೂ, ಅದು ತನಗೆ ಬೇಡವೆಂದು ಸುಕುಮಾರ ಹೇಳಿದಾಗ, ಅದನ್ನು 32 ಜನ ಸೊಸೆಯರಿಗೆ 32 ಜೊತೆ ಚಮ್ಮಾವುಗೆಗಳನ್ನು ಮಾಡಿಸಿಕೊಡುವುದೂ ಆ ಮನೆಯ ಅಗರ್ಭ ಶ್ರೀಮಂತಿಕೆಯನ್ನು ತೋರಿಸುತ್ತದೆ.

ಇಂತಹ ಆಗರ್ಭ ಶ್ರೀಮಂತನನ್ನು ನೋಡಬಯಸಿ ಬಂದ ಪಟ್ಟಣದ ರಾಜನೊಡನೆ ಊಟಕ್ಕೆ ಕುಳಿತ ಸುಕುಮಾರನಿಗೆ ಸೇಸೆ ಯಿಕ್ಕಿದ ಸಾಸಿವೆ ಕಾಳುಗಳು ಒತ್ತುವುದೂ, ಅದರಿಂದ ಆತನು ಅತ್ತಿತ್ತ ಚಲಿಸುವುದೂ, ಆರತಿಯು ಬೆಳಕನ್ನು ನೋಡಿದುದರಿಂದ ಆತನ ಕಣ್ಣಲ್ಲಿ ನೀರು ಬರುತ್ತಿದ್ದುದೂ, ಪುಷ್ಪವಾಸದ ಅಕ್ಕಿಯ ಅನ್ನವಲ್ಲದೆ ಬೇರೆಯದನ್ನು ಕೆಳಗೆ ಉಗುಳುತ್ತಿದ್ದುದೂ ಸುಕುಮಾರನ ಸುಕೋಮಲ ಮಧುರ ವ್ಯಕ್ತಿತ್ವವನ್ನು ಸೂಚಿಸುತ್ತವೆ. ಇಂತಹವನೂ ಸಂಸಾರದ ಅಸಾರತೆಯನ್ನು ಅರಿತಕೂಡಲೆ ತಪಸ್ಸಿಗೆ ತೆರಳುತ್ತಾನೆ.

**ಪಟಹಸ್ತ :**

ಪಟಹಸ್ತನೆಂಬ ಕಡುಲೋಭಿಯ ಚಿತ್ರವೂ ಉತ್ತಮವಾದುದಾಗಿದೆ. ಈತನು ಬಿಸಿಲು ಚಳಿಗಳನ್ನು ಲೆಕ್ಕಿಸದೆ ದುಡಿಯುವ ಕಷ್ಟಜೀವಿ. ಕಷ್ಟಪಟ್ಟು ಸಂಪಾದಿಸಿ ಚಿನ್ನದ ಎತ್ತೊಂದನ್ನು ಮಾಡಿಟ್ಟ ಧೀರ. ಆದರೆ ಅದರ ಜತೆಗೆ ಮತ್ತೊಂದನ್ನು ಮಾಡಬೇಕೆಂಬ ದುರಾಸೆಯ ಮನುಷ್ಯನಾಗಿ ರಾಜನ ಅವಕೃಪೆಗೆ ಪಾತ್ರನಾಗುತ್ತಾನೆ. ಬಹಳ ಕಷ್ಟದಿಂದ ಸಂಪಾದಿಸಿದ ಎತ್ತನ್ನು ರಾಜನು ತನ್ನ ಭಂಡಾರಕ್ಕೆ ಸೇರಿಸಿಕೊಂಡಾಗ ಆತನು ಎದೆಯೊಡೆದು ಸಾಯುತ್ತಾನೆ. ಲೋಭತ್ವಕ್ಕೆ ಉತ್ತಮ ಉದಾಹರಣೆಯಾಗಿ ಪಟಹಸ್ತ ಚಿತ್ರಿತನಾಗಿದ್ದಾನೆ.

ಇದರಂತೆಯೇ ಇನ್ನೂ ಹಲವಾರು ಸಣ್ಣ ಪುಟ್ಟ ಪಾತ್ರಗಳು ಬಂದರೂ ಎಲ್ಲವೂ ಸಂಕ್ಷಿಪ್ತವಾಗಿ ನಿರೂಪಿತವಾಗಿವೆ.

**ವರ್ಣನೆಗಳು :**

ಕಾವ್ಯದ ಮೊದಲಲ್ಲಿಯೇ ಬರುವ ವಸುದೇವನ ಚಿತ್ರಣ

ಕವಿಯ ಸುಂದರ ಸನ್ನಿವೇಶ ನಿರ್ಮಾಣಕ್ಕೆ ಸಾಕ್ಷಿಯಾಗಿದೆ. ಪಟ್ಟಣದ ಬೀದಿಯಲ್ಲಿ ಬರುತ್ತಿದ್ದ ಆತನನ್ನು

ಎಳನೇಸಱಿಂದದಿಂ ತೊಳ
ಪಳವಡೆ ನೇರ್ಪಡೆ ಬೆಡಂಗೊಡಂಬಡೆ ಬಪ್ಪ
ಗ್ಗಳಿಕೆಗೆ ಪೊಱಲಚ್ಚರಿವಡೆ
ವಿಳಾಸಮಂ ಮೆಱೆದು ನೆಱೆಯೆ ಸೊಗಯಿಸಿ
ತೋರ್ಕುಂ ೧-೪೦

ಎಂದು ಒಮ್ಮೆ ವರ್ಣಿಸಿದರೆ, ಮತ್ತೊಮ್ಮೆ "ದುಕೂಲವಸ್ತ್ರಮನುಟ್ಟು ಮುತ್ತಿನಾಭರಣಮಂ ತೊಟ್ಟು ಮಲ್ಲಿಗೆಯ ಪೂವಂ ತುಱುಂಬಿ ಚಂದನಮಂ ಪೂಸಿ ರಜತಯೋಗಾಳಂಕೃತಮಪ್ಪ ಶ್ವೇತಾಶ್ವಮನೇಱಿ" (೧-೪೦ವ) "ತಾರಾಗಣ ಪರಿವೃತಮಿಧಾರಿಣಿಗಿೞಿತಂದ ಚಂದ್ರನೆನೆ" (೧-೪೧) ಬರುತ್ತಿದ್ದ ವರ್ಣನೆ ವಸುದೇವನ ಪಾತ್ರದ ಘನತೆಗೆ ತಕ್ಕಂತಹುದಾಗಿದೆ. ಆತನನ್ನು ನೋಡಿದ ಜನ "ಸುರನೋ ಸುರನಲ್ಲಂ" (೧-೪೪) ಎಂದು ಸಂದೇಹಿಸಿ ಒಬ್ಬರನ್ನೊಬ್ಬರು ಕೇಳಿಕೊಳ್ಳುತ್ತಿದ್ದ ಸನ್ನಿವೇಶ, ಇಂತಹ ಮದನಾಂಗನನ್ನು ಕಂಡ ವಾರಾಂಗನೆಯರು ಆತನನ್ನು ನೋಡಲು ಮನೆ ಮನೆಗಳಿಂದ ಹೊರಬರುತ್ತಿದ್ದ ವರ್ಣನೆಗಳು ಬಂಧುವರ್ಮನ ಕವಿತಾಶಕ್ತಿಗೆ ಕನ್ನಡಿ ಹಿಡಿಯುತ್ತವೆ. ಹೀಗೆ ನೋಡಬಂದ ಸ್ತ್ರೀಯರ ಚಿತ್ರವನ್ನು

ನೆಲೆಮೊಲೆಗಳಲುಗೆ ಮೇಲುದು
ತೊಲಗೆ ಕುರುಳ್ ಮಿಳಿರ್ದು ಪೊಳೆಯೆ ಮುಡಿ
ಬೆನ್ನೊಳ್ ಬಂ

ದಲೆಯೆ ಖಳರುಲಿಯೆ ಪಲರುಂ
ಬಲನೆಯ್ದುರೊಡನೆ ಪರಿದು ನೋಡಿದಳಾಗಳ್ ೧–೪೫

ಎಂದು ಬಣ್ಣಿಸುತ್ತಾನೆ. ಮತ್ತೊಬ್ಬಾಕೆಯು ಒಡನಿರ್ದ ನಲ್ಲನನ್ನು ಬಿಟ್ಟು ಬರುವಲ್ಲಿ, ಆತನು ಆಕೆಯ ಸೆರಗನ್ನು ಹಿಡಿದರೆ ಅದನ್ನು ಹಾಗೆಯೇ ಬಿಟ್ಟು "ಸಡಿಲ್ದುಡೆಯುನಣಮೆ ಬಗೆಯದೆ ಪರಿದಳ್" (೧–೪೬) ಎಂದು ಚಿತ್ರಿಸುತ್ತಾನೆ. ಹೀಗೆ ವಿವಿಧ ಚಿತ್ರಗಳ ನಿರೂಪಣೆಯಲ್ಲಿ ವಸುದೇವನ ಹೆಗ್ಗಳಿಕೆಯನ್ನೂ, ಸ್ತ್ರೀಯರ ಮನೋವೈಕಲ್ಯವನ್ನೂ ಒಟ್ಟಿಗೆ ಒದಗಿಸುತ್ತಾನೆ.

ಇಂತಹ ಸ್ಥಿತಿಯಿಂದ ಪುರಜನರು ಚಿಂತಿತರಾಗಿ ಸಮುದ್ರವಿಜಯನಲ್ಲಿ ಮೊರೆಯಿಡಲು, ಆತನು ತಮ್ಮನನ್ನು ಕುರಿತು

ಕಂದಿದುದೊಪ್ಪುವ ಮೆಯ್ ಕರ
ಮೊಂದಿದುದೇಳಿದಿಕೆ ತೊಟಿಲುತಿರೆ ನಿನಗದಱಿಂ
ನಂದನವನದೊಳ್ ನಿನಗಾ
ನಂದಮುಮುಪ್ಪಂತು ಸುಖದಿನಿರು ನಿಶ್ಚಿಂತಂ ೨–೨

ಎಂದು ಹೇಳುವಲ್ಲಿ ಸಮುದ್ರವಿಜಯ ತಮ್ಮನಲ್ಲಿಟ್ಟಿರುವ ಅಗಾಧ ಪ್ರೀತಿಯನ್ನು ವ್ಯಕ್ತಗೊಳಿಸುತ್ತದೆ. ಹೀಗೆ ಅಣ್ಣನು ತನ್ನನ್ನು ಉಪಾಯದಿಂದ ಅಂಕೆಯಲ್ಲಿರಿಸಿರುವನೆಂಬುದನ್ನು ತಿಳಿದ ವಸುದೇವನು ತಾನು ಮಾಡದಂತಹ ತಪ್ಪಿಗೆ ತಾನು ಗುರಿಯಾಗಿರುವುದನ್ನು ತಿಳಿದು "ಲತಾಭವನದೊಳಮಿರ್ದು ಖೇದಮನಸ್ಕನಾಗಿ" (೨–೬೮)

ಒಡನಾಂ ಪುಟ್ಟಿದೆನೆಂದು ಕೊಂಡಱಿವೆನೇ ತನ್ನೀಯ
ದರ್ಥಂಗಳಂ

> ಗೆಡೆಗೊಂಡಿರ್ದನೆ ತನ್ನ ಮೆಚ್ಚುವವರಂ ಪೈ ಮುಟ್ಟ
> ದುರ್ವೃತ್ತಿಯಿಂ
> ನಡೆಯುತ್ತಿರ್ದನೆ ಕೆಮ್ಮನಿಂತು ಬನದೊಳ್ ತಂದಿಟ್ಟು
> ಕಾಯಲ್ ಕರಂ
> ನಡೆಕಾಯಲ್ ಕಡುಗೂರ್ಪೆಯಿಂ ನಡಪುತಿರ್ದಣ್ಣಂ
> ಗಿದೇಂ ತಕ್ಕುದೇ ೨-೭

ಎಂದು ಹೇಳುವಲ್ಲಿ ವಸುದೇವನ ಸರಳ ಸ್ವಭಾವ, ಅಣ್ಣನಲ್ಲಿಟ್ಟಿರುವ ಪ್ರೀತಿ, ಸನ್ನಡತೆ–ಮೊದಲಾದ ಸದ್ಗುಣಗಳು ವ್ಯಕ್ತವಾಗುತ್ತವೆ. ಹೀಗೆ ಯೋಚಿಸಿ ಚಿಂತೆಗೀಡಾದ ವಸುದೇವನು ದೇಶತ್ಯಾಗವೇ ಸರಿಯೆಂದು ನಿಶ್ಚಯಿಸಿ ಅಗ್ನಿಪ್ರವೇಶ ಮಾಡಿದವನಂತೆ ನಟಿಸಿ ಪಟ್ಟಣವನ್ನು ಬಿಟ್ಟು ಹೋದ ಮೇಲೆ ಸಮುದ್ರವಿಜಯ ತಲ್ಲಣಗೊಳ್ಳುತ್ತಾನೆ. ವಸುದೇವನು ಸತ್ತನೆಂದೇ ತಿಳಿದ ಆತನ ವಿವಿಧ ರೀತಿಯ ಹಲುಬುವಿಕೆಯಲ್ಲಿ ಅಣ್ಣ ತಮ್ಮಂದಿರ ಅಗಾಧ ಪ್ರೇಮವನ್ನೂ ಅತಿಶಯ ಗುಣಗಳನ್ನೂ ಕಾಣಬಹುದಾಗಿದೆ. ಇಲ್ಲಿ ಬಂಧುವರ್ಮ ರನ್ನನ ಗದಾಯುದ್ಧದಿಂದ ಪ್ರೇರೇಪಿತನಾಗಿರಬಹುದು ಎಂದೆನ್ನಿಸುತ್ತದೆ. ದುರ್ಯೋಧನನು ದುಶ್ಶಾಸನ ಕರ್ಣರನ್ನು ಕಳೆದುಕೊಂಡಾಗ ದುಃಖಿಸುವ ಸನ್ನಿವೇಶ ಇಲ್ಲಿಯೂ ಕಂಡುಬರುತ್ತದೆ.

ಅತುಳೈಶ್ವರ್ಯದಿಂದ ಕೂಡಿದ ಭಾನುದತ್ತಸೆಟ್ಟಿ ದಂಪತಿಗಳಿಗೆ ಮಕ್ಕಳಿಲ್ಲದಿರಲು ಚಾರಣರ ಆದೇಶದಂತೆ ಒಬ್ಬ ಮಗನನ್ನು ಪಡೆದರು. ಸಕಲ ವಿದ್ಯಾಪಾರಂಗತನಾದ ಮಗ ಚಾರುದತ್ತನಿಗೆ ಮಿತ್ರಾವತಿಯನ್ನು ತಂದು ಮದುವೆ ಮಾಡಿದರು. ಮದುವೆಯಾದ ಚಾರುದತ್ತನು ವಿದ್ಯಾಭ್ಯಾಸದಲ್ಲಿಯೇ ನಿರತನಾಗಿ ನಿಜ

ಸ್ತ್ರೀಯನ್ನು ಕಡೆಗಣಿಸಿದಾಗ ಮಿತ್ರಾವತಿಯ ತಾಯಿಗೆ ಅಗಾಧ ನೋವಾಯಿತು. ಈ ಸನ್ನಿವೇಶದ ಚಿತ್ರಣದಲ್ಲಿ ಬಂಧುವರ್ಮನ ಕಲಾಪ್ರತಿಭೆಯನ್ನೂ ಸಾಮಾಜಿಕ ಅರಿವನ್ನೂ ಕಾಣುತ್ತೇವೆ. ಮಗಳ ಮುಡಿದ ಮುಡಿ, ಇಟ್ಟ ಕುಂಕುಮ–ಎಲ್ಲವೂ ಇದ್ದಂತೆಯೇ ಇದ್ದುದನ್ನು ಕಂಡ ತಾಯಿಗೆ ಎಲ್ಲಿಲ್ಲದ ಸಂಕಟ ವಾಗಿರಬೇಕು. ಆಕೆಯು

ನೀನಾತಂಗಾತಂ ನಿನ
ಗೇನುಂ ತಪ್ಪಿಲ್ಲ ತಕ್ಕನೇ ಕೂಡಿದಿರಿಂ
ತೇನು ಗಡ ತಪಸಿಯಂತಿರೆ
ಮೌನಧ್ಯಾನದೊಳೆ ಕಳೆದಿರೇ ನಿಮ್ಮಿರುಳಂ ೩–೧೯

ಎಂದು ಸಹಜವಾಗಿ ಕೇಳುವ ತಾಯಿಗೆ ಮಗಳು ನಾಚಿ ತಲೆ ತಗ್ಗಿಸುವುದೂ ಮತ್ತೆ ತಾಯಿಯು 'ಮಗಳಾದವಳು ತಾಯಿಗೆ ಹೇಳದೆ ಮತ್ತಾರಿಗೆ ಹೇಳುವುದು' ಎಂದು ಕೇಳುವುದೂ, ಆಗ ಮಿತ್ರಾವತಿಯು ತಾನು ಕಂಡ ಸನ್ನಿವೇಶವನ್ನು ತನ್ನದಾದ ರೀತಿ ಯಲ್ಲಿಯೇ ನಿರೂಪಿಸುವುದೂ ಬಂಧುವರ್ಮನ ಕವಿಪ್ರತಿಭೆಯ ಸಂಕೇತವಾಗಿದೆ. ಚಾರುದತ್ತನು ಶಾಸ್ತ್ರಾಭ್ಯಾಸಕ್ಕಾಗಿ ಉಪ ಯೋಗಿಸಿದ ಪ್ರತಿ ವಸ್ತುವೂ ಮಿತ್ರಾವತಿಯ ಮುಗ್ಧ ಮನಸ್ಸಿಗೆ ಕಂಡ ರೀತಿಯನ್ನು ಚಿತ್ರಿಸಿರುವುದು ಮನೋಜ್ಞವಾಗಿದೆ.

ಮರದೊಳ್ ಕಟ್ಟಿದ ಸೊರೆಯಂ
ಸರಾಗದಿಂದುರದೊಳಟ್ಟು ಬೀವಿನ ನೇಣಂ
ಬೆರಲೊಳವನರ್ದಿ ಮಿಡಿಗುಂ
ಮೊರೆಗುಂ ಬಟಿಕೊರ್ಮೆ ಕರ್ಚುಗುಂ ಪೆರ್ವಿದಿರಂ

ತೋಲೊಳ್ ಮುಚ್ಚಿದ ಮಾಟ್ಕೆಯು
ಕೇಲವ ಮುಂದಿಟ್ಟು ಬಡಿವುತಿರ್ಪಂ ಪಲರಂ
ಸೋಲಿಸುತೆ ಬಟಿಕೆ ತೊಡೆಗಳ
ಮೇಲಡ್ಡಂ ಕೊಱಡನಿಟ್ಟು ರಾಗದೆ ಬಡಿಗುಂ
ಪಾಡುಗುಮಡುತರ್ಮೊಗುಮಿಗೆ
ನೋಡುಗುಮಭಿನಯಿಸಿ ಪಲವು ರಸಭಾವನೆಯಿಂ
ದಾಡುಗಮಾಗದೆ ಕಬ್ಬಂ
ಮಾಡುಗುಮೋಲೆಗಳನಣಮೆ ಬರೆಯುತ್ತಿರ್ಕುಂ
ನೆಲನಂ ಬರೆಗುಂ ಮತ್ತಂ
ಪಲಗೆಗಳೊಳ್ ಪಲವು ತೆಱದ ವರ್ಣಕ್ರಮದಿಂ
ಪಲವುಂ ರೂಪಂ ಬರೆಗುಂ
ಪಲವಾಡುವನಂತೆ ತಾನೆ ತನ್ನೊಳ್ ನುಡಿಗುಂ
ಸುರಿಗೆಯನಾಡುಗುಮಂತಾ
ಮುರವಾಳಂ ಕೊಂಡು ಬೀಸುತಿರ್ಕುಂ ಪೆಱತೇ
ನಿರುಳೆಲ್ಲಮಿಂತೆ ಪೋಪುದು
ಮುರುಳಪ್ಪಂಗೇನೊ ಕೋಡೊಂದುಟಿಯಲ್

೩–೧೨–೨೬

ಎಂದು ವರ್ಣಿತವಾಗಿರುವುದು ಮಿತ್ರಾವತಿಯ ಮುಗ್ಧತೆಯನ್ನು ತೋರಿಸುವುದರ ಜತೆಗೆ ಆಕೆಗೆ ಆ ಸಂದರ್ಭದಲ್ಲಿ ಯಾವ ಶಾಸ್ತ್ರಾಭ್ಯಾಸದತ್ತಲೂ ಮನಸ್ಸು ಹರಿಯದಿರುವುದನ್ನೂ ಕಾಣಬಹುದು.

ಹೀಗೆ ಕೈಹಿಡಿದ ಸತಿಯನ್ನು ಕಡೆಗಣಿಸಿ ಶಾಸ್ತ್ರಾಭ್ಯಾಸದಲ್ಲಿ ನಿರತನಾಗಿದ್ದ ಒಬ್ಬ ಉದಾತ್ತ ವ್ಯಕ್ತಿ ಕೀಳು ಮನುಷ್ಯನೊಬ್ಬನ ಸಹವಾಸದಿಂದ ವೇಶ್ಯೆಯಲ್ಲಿ ಸೇರುವುದು ಮೇಲುನೋಟಕ್ಕೆ

ಅಸಹಜವಾಗಿ ತೋರುತ್ತದೆ. ಆದರೆ ಅದು ನಡೆದುಹೋದುದರ ಚಿತ್ರಣವನ್ನು ಬಂಧುವರ್ಮ ಅತ್ಯಂತ ಯಶಸ್ವಿಯಾಗಿ, ಸಹೃದಯರಿಗೆ ಯಾವ ಆಶಂಕೆಯೂ ಒದಗದಂತೆ ನಿರ್ವಹಿಸಿರುವುದು ತುಂಬಾ ಮನೋಜ್ಞವಾಗಿದೆ.

ಕಾವ್ಯದಲ್ಲಿನ ಮತ್ತೊಂದು ರಸಸನ್ನಿವೇಶವೆಂದರೆ ಪದ್ಮಾವತಿಯ ಚಿತ್ರಣ. ಹೆಂಗಸು ಗರ್ಭವತಿಯಾದಾಗ ಬಯಕೆಗಳುಂಟಾಗುವುದು ಸಾಮಾನ್ಯವಾದುದು. ಆದರೆ ಆ ಬಯಕೆಗಳು ವಿಚಿತ್ರ ರೀತಿಯಲ್ಲುಂಟಾದಾಗ, ಅದನ್ನು ನಿರ್ವಹಿಸುವುದು ಕಠಿಣವಾದಾಗ ಮಾತ್ರ ಆಶಂಕೆಗೊಳ್ಳುತ್ತೇವೆ. ತನ್ನ ಬಯಕೆಯಿಂದ ಚಿಂತಿತಳಾದ ಪದ್ಮಾವತಿಯ ಚಿತ್ರವನ್ನೂ, ಅದನ್ನು ಈಡೇರಿಸಿದ ಬಗೆಯನ್ನೂ ಕವಿ ಅತ್ಯಂತ ಸೂಕ್ಷ್ಮವಾಗಿ ನವಿರಾಗಿ ಚಿತ್ರಿಸಿದ್ದಾನೆ.

ಪದ್ಮಾವತಿಯು "ಪಾತಕಿಯ ಬಯಕೆಯ ಪೇಳಲಾಗದೆಂದು" ಬೆಚ್ಚನೆ ಬಿಸುಸುಯ್ಯುವುದೂ, ಪೊಲ್ಲದುದಂ ಬಯಸಿದುದು ನಿನ್ನ ದೋಷಮಲ್ತು ನಿನ್ನ ಬಸಿಱೊಳಿರ್ದ ಪ್ರಾಣಿಯ ಬಯಕೆಯಕ್ಕುಮದಕ್ಕೆ. ಸಂಕಿಸದೆ ಪೇೞೆಂದು ಕೇೞೆ ಬೆಸಗೊಂಡಡೆ" (೫-೩೮೧) ಅವಳು

ಸುರಿಗೆಯೊಳಂ ದೊಕ್ಕನೆ ನಿ
ನ್ನುರಮಂ ಪಿಡಿದಿೞಿದು ತೆಗೆಯೆ ಭೋರ್ಗರೆದು
ಕರಂ ಸುರಿದೈತಪ್ಪ ಬಿಸಿಯ ನೆ
ತ್ತರ ಗಟಗಟನಾಂ ಕುಡಿಯಲೆ ಬಯಸಿದೆನರಸಾ ೫–೩೯

ಎಂದು ಹೇಳುವುದೂ ಸಹಜ ರೀತಿಯಲ್ಲಿ ಚಿತ್ರಿತವಾಗಿವೆ.

ಇಲ್ಲಿ ದೊಕ್ಕನೆ ಗಟಗಟನೆ ಮೊದಲಾದ ಪದಗಳ ಬಳಕೆಯಿಂದ ಪದ್ಮಾವತಿಯ ಮನದ ಉದ್ವೇಗ ಗೋಚರವಾಗುತ್ತದೆ. ಆಕೆಯು ಈ ವಿಷಯವನ್ನು ಹೇಳಲಾರಳು, ಹೇಳದಿರಲಾರಳು ಎಂಬ ಇಕ್ಕಟ್ಟಿನ ಸ್ಥಿತಿಯಲ್ಲಿದ್ದು, ಒತ್ತಾಯಪೂರ್ವಕವಾಗಿ ಹೇಳಲೇಬೇಕಾದಾಗ ಒಂದೇ ಉಸಿರಿನಲ್ಲಿ ಹೇಳುವ ಈ ಸನ್ನಿವೇಶ ಯಶಸ್ವಿಯಾಗಿ ನಿರೂಪಣೆಗೊಂಡಿದೆ. ಈ ಬಯಕೆಯನ್ನು ಉಪಾಯದಿಂದ ಈಡೇರಿಸಬೇಕೆಂದು ಬಗೆದ ಪೆರ್ಗಡೆಯರ ಆದೇಶದಂತೆ ಲೆಪ್ಪದ ಬೊಂಬೆಯನ್ನು ಮಾಡಿಸಿ "ನೆನೆಯಲಾಗದುದಂ ನೋಡಲಾಗದೆಂದರಸಿಯ ಕಣ್ಣಂ ಕಟ್ಟಿಸಿ ಸುರಿಗೆಯಂ ಕೆಯ್ಯೊಳ್ ಕೊಟ್ಟು ಮುಂದಣ್ಗೆ ತಂದು ಬೇಗಂ ನೆಗೞ್ವುದೆನೆ" (೫–೪೦) ಆಕೆಯು

ಎಡಗೆಯ್ಯೊಳ್ ಮುಂದಲೆಯಂ
ಪಿಡಿದಿಱಿದು ಮರಲ್ಚಿಯೊತ್ತಿ ಸುರಿಗೆಯೊಳುರಮಂ
ಪಿಡಿಗುತ್ತುಗುತ್ತಿ ನೆತ್ತರ
ನುಡುಪಾನನೆ ಕುಡಿದು ತಣಿದು ಮೂರ್ಛೆಗೆ ಸಂದಳ್
(೫–೪೧)

ಎಂದು ವರ್ಣಿಸುವ ಭಾಗ ತುಂಬಾ ಕ್ರೂರವಾಗಿ ಕಂಡರೂ, ಪದ್ಮಾವತಿ ಈ ಕೆಲಸ ಮಾಡಬಹುದೇ ಎಂದರೂ ಕಥಾಪರಿಸರಕ್ಕೆ ಹೊಂದಿಕೊಳ್ಳುವಂತಹ ರೀತಿಯಲ್ಲಿ ಕವಿ ನಿರೂಪಿಸಿರುವುದು ಮೆಚ್ಚುಗೆಯ ಮಾತಾಗಿದೆ.

ಅಂತೆಯೇ ಇಲ್ಲಿ ಬರುವ ಮಾದೆಂಗಿತಿಯ ಚಿತ್ರವೂ ಕವಿಯ ವರ್ಣನಾಚಾತುರ್ಯವನ್ನೂ ಕಲ್ಪನಾಶಕ್ತಿಯನ್ನೂ ಸೂಚಿಸುತ್ತದೆ.

ಜಗವಂ ಮಱುಗಿಸಿ ಕೊಱಚಾ
ಟಗೆಯುಲ್ ನೆಱೆ ನಾಡೆ ಕೂಡುವ ಬಗೆಯಿಂ ಬಿದಿ
ಮಿಗೆ ಮಾಡಿದನೆಂಬಂತಿರೆ
ಪೊಗಱಲ್ ಕರಮಱಿದು ರೂಪು ಮಾದೆಂಗಿತಿಯಾ
ಮುಟ್ಟಲ್ಕಾಗದ ಕುಲದೊಳ್
ಪುಟ್ಟಿಸಿ ಪಲರ್ಗಱಿಲನಾಗಿಸಲ್ಕೆ ವಿಧಾತ್ರಂ
ನೆಟ್ಟನೆ ಮಾಡಿದನೆಂಬಂ
ತಿರೆ ಪೊಗಱಲ್ ಕರಮಱಿದು ರೂಪು ಮಾದೆಂಗಿತಿಯಾ
೫–೮–೯

ಎಂಬಿವೇ ಮೊದಲಾದ ವರ್ಣನೆಗಳಲ್ಲಿ ವಸುದೇವನ ಮನದ ತಳಮಳವನ್ನು ಕಾಣಬಹುದು.

ಕೃಷ್ಣನನ್ನು ಕೊಲ್ಲ ಕಳುಹಿದ ಕಂಸನ ಉಗ್ರದೇವತೆಗಳು ಕೃಷ್ಣನಿಂದ ನಾಶವಾಗುವ ಸನ್ನಿವೇಶಗಳೂ ಬಂಧುವರ್ಮನಲ್ಲಿ ಬಹು ಚೆನ್ನಾಗಿ ನಿರೂಪಿತವಾಗಿವೆ. ಕತ್ತೆಯ ರೂಪನ್ನು ಧರಿಸಿ ಬಂದ ಗಾರ್ದಭಿಯನ್ನು ಕೊಂದ ಬಗೆಯನ್ನು

ಪಿಂಗಾಲಂ ಪಿಡಿದೆತ್ತಿಕೊಂಡಸಗವೊಯ್ಲೊಯ್ವುತ್ತು
ಮಿರ್ದಾಗಳಾ
ತಂಗಾ ದೇವತೆ ಬೆರ್ಚಿ ಪೋಗೆ ಪಲರುಂ ನೋಡುತ್ತ
ಮಿರ್ದೆಂಬರೀ
ತಂಗೀ ಪ್ರಾಯದೊಳಿಂತುಟಾದುದು ಬಲಂ ತಾ ಜವ್ವನಂ
ಪೊರ್ದಿದಂ
ದೇಂ ಗಂಡರ್ ಪೆಱರಾಂಪರೆಂಬರೊಳರೇ ಭೂಲೋಕ
ದೊಳ್ ನಾಕದೊಳ್ ೬–೧೯

ಎಂದು ವರ್ಣಿಸುವಲ್ಲಿ ಗಾರ್ದಭಿಯ ಉಗ್ರತೆಯೂ ಕೃಷ್ಣನ ಸಾಹಸವೂ ಸಮಾನವಾಗಿ ನಿರೂಪಿತವಾಗಿರುವುದನ್ನು ಕಾಣಬಹುದು. ಹೀಗೆ ಕೃಷ್ಣನು ಗಾರ್ದಭರೂಪದ ಉಗ್ರದೇವತೆಯನ್ನು ಗೆದ್ದರೆ, ಮತ್ತೆ ದುಷ್ಟಾಶ್ವದ ರೂಪದಿಂದ ಬಂದ ಕೇಶನಿಯೆಂಬ ದೇವತೆಯನ್ನು ಕೊಂದ ಬಗೆಯನ್ನು ಬಂಧುವರ್ಮ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾನೆ.

ಬಂಧುವರ್ಮನು ತನ್ನ ಕಾವ್ಯಗಳಲ್ಲಿ ವರ್ಣನೆಗಳನ್ನು ಅತಿಯಾಗಿ ಲಂಬಿಸದೆ ಚಿತ್ರಗಳನ್ನು ನೀಡುವುದೇ ಹೆಚ್ಚು. ಅದಕ್ಕೆ ಅಪವಾದವೆಂಬಂತೆ ತಾನೂ ಲಂಬಿತ ವರ್ಣನೆಯನ್ನು ಮಾಡಬಲ್ಲೆನೆಂಬುದಕ್ಕೆ ಸಾಕ್ಷಿಯನ್ನು ಸೂಚಿಸುವಂತೆ ರುಗ್ಮಿಣಿಯ ವರ್ಣನೆಯನ್ನು ಮಾಡಿದ್ದಾನೆ. ಈ ವರ್ಣನೆ ೩೧ ಕಂದಪದ್ಯಗಳಲ್ಲಿ ಹರಡಿದೆ. ಇದರಲ್ಲಿ ಯಾವ ಹೆಗ್ಗಳಿಕೆ ಕಂಡುಬರದಿದ್ದರೂ ೭–೨೭,೩೯ ಮೊದಲಾದ ಪದ್ಯಗಳಲ್ಲಿ ಕವಿಯ ಕಲ್ಪನೆಯ ಹೊಳಹನ್ನು ಗುರುತಿಸಬಹುದು.

ಸಹೃದಯರ ಮೆಚ್ಚುಗೆಗೆ ಪಾತ್ರವಾದ ಮತ್ತೊಂದು ಚಿತ್ರಣವೆಂದರೆ ಕನಕಮಾಲೆ ಅಥವಾ ಕಾಂಚನಮಾಲೆ ಪ್ರದ್ಯುಮ್ನನನ್ನು ಕೂಡಬಯಸುವುದು. ಕನಕಮಾಲೆಯು ಪ್ರದ್ಯುಮ್ನನಲ್ಲಿ ಅನುರಕ್ತಳಾದುದನ್ನು

ದಿಟ್ಟ ತೊಡಂಕೆ ರೂಪಿನ ಬೆಡಂಗಿನೊಳೊಪ್ಪುವ ರೂಪು ಚಿತ್ತದೊಳ್
ಪುಟ್ಟಿಸಿ ಸೋಲಮಂ ಕರಮೆ ಸೋಲ್ತ ಮನಂ ಕಡುರಾಗದಿಂದಲಂ
ಪಿಟ್ಟಳಮಪ್ಪ ಕೂಟಮನೆ ಚಿಂತಿಸಿ ಕೂಟದ ಚಿಂತೆ ನೋವುದಂ
ತೊಟ್ಟನೆ ಮಾಡೆ ನೋವ ಮದನಜ್ವರಮಂ ಪಡೆದತ್ತು

ಕಾಂತೆಯೊಳ್ ೮–೫೩

ಎಂದು ವರ್ಣಿಸಿ ಕಾಮಪಿಪಾಸಿಯ ಚಿತ್ತವಿಕಾರವನ್ನೂ, ಆಕೆಯ ಮನದಲ್ಲುಂಟಾದ ವಿವಿಧ ಭಾವಗಳನ್ನೂ ಸೊಗಸಾಗಿ ಹಿಡಿದಿರಿಸಿದ್ದಾನೆ. ಮದನಜ್ವರಪೀಡಿತಳಾದ ಆಕೆಗೆ ಸೆರಗಾವುದು ಬೆರಗಾವುದು, ತಣ್ಪಾವುದು ಆಸೆಯಾವುದೆನ್ನುವುದಾವುದೂ ಅರ್ಥವಾಗುವುದಿಲ್ಲ. ಆಕೆಯು"ಕಣ್ಗಳೊಳ್ ತೊಳಲುತಿರ್ದಪ ನನಂಗನೈದುಮಂಬಿನೊಳ್ ನೋಯಿಸುತಿರ್ಪನುಂ" (೮-೫೫) ಎಂದು ಹೇಳುವ ಮಾತುಗಳು ಕನಕಮಾಲೆಯ ಮದನೋತ್ಕಟ ಸ್ಥಿತಿಯನ್ನು ಸೂಚಿಸಿ ಬಂಧುವರ್ಮನ ಕಾವ್ಯಪ್ರತಿಭೆಯ ಹೆಚ್ಚಳವನ್ನು ಹೊರಗೆಡಹುತ್ತವೆ.

ಹೀಗೆ ಮದನಬಾಧೆಯಿಂದ ಪೀಡಿತಳಾದ ಆಕೆಯು "ಪಂಬಲಿಸಿ ಪಲುಂಬುತುಂ ತಾನಾತಂಗೆ ತಾಯೆಂಬುದಂ ಬಗೆದಳಿಲ್ಲ ಮನ ಮಳ್ಕಾಡಿದುದನೆ ಬಗೆದಳ್ ಪಾಪಮಂ ಬಗೆದಳಿಲ್ಲ ಪರಿತಾಪ ಮನೆ ಬಗೆದಳ್ ಕುಲಮಂ ಬಗೆದಳಿಲ್ಲ ವಿರಹಂ ನೀಗದೆಂಬುದನೆ ಬಗೆದಳ್'' (೮-೫೬ವ) ಎಂದೆಲ್ಲಾ ವರ್ಣಿಸುವ ಸನ್ನಿವೇಶ ಸಾಮಾಜಿಕ ಎಚ್ಚರಿಕೆಯಾಗಿ ಪರಿಣಮಿಸಿದೆ.

ಕನಕಮಾಲೆ ಮತ್ತು ಪ್ರದ್ಯುಮ್ನರ ನಡುವೆ ನಡೆಯುವ ಮಾತುಕತೆಗಳ ಸಂದರ್ಭವೂ ಒಂದು ಮಹತ್ತರವಾದ ಕವಿಯ ನಿರ್ಮಾಣವಾಗಿದೆ. ಇಲ್ಲಿ ಬರುವ ಆಕೆಯ ಹೃದಯ ತಾಪ, ಆತನ ನಿಜಸ್ವರೂಪ ಓದುಗರ ಮನ ಸೆಳೆಯುತ್ತದೆ. ತನ್ನ ಕೀಳ್‌ಬಯಕೆ ಈಡೇರದಾದಾಗ ಮಗನನ್ನೇ ಕೊಲ್ಲಿಸುವೆನೆಂದು ಹೇಳಿದ ತಾಯಿಗೆ ಪ್ರದ್ಯುಮ್ನನು

ನಿಮ್ಮ ಮಗನೆಂದು ಬರ್ದುಕುವೆ
ನುಮ್ಮಡಿಸೆನದೆಂತುಮುಬ್ಬ ಕೊಂಡಡೆ ಪಾಪಂ

ನಿಮ್ಮನೆ ಸಾರ್ಗುಂ ತಾಯ್ ಮುಳಿ
ಸಿಮ್ಮಗನಂ ಕೊಂದಳೆಂಬುದೆಲ್ಲಿಯುಮುಂಟೇ ೮-೬೯

ಎಂದು ಹೇಳಿಕೊಳ್ಳುವ ಮಾತುಗಳು ಎಂತಹ ಕಠಿಣ ಹೃದಯ ವನ್ನೂ ಕರಗಿಸುತ್ತವೆ. ಆದರೆ ಕನಕಮಾಲೆಯ ಹೃದಯ ಕಲ್ಲಾಗಿ ನಿಲ್ಲುತ್ತದೆ. ಆಕೆಯು ತನ್ನ ಸೇಡನ್ನು ತೀರಿಸಿ ಕೊಳ್ಳಲು ಮುಂದಾಗಿ, ಬಲಿಷ್ಠನಾದ ಪ್ರದ್ಯುಮ್ನನ ಎದುರು ಸೋತು ಸೊರಗುತ್ತಾಳೆ. ಪ್ರದ್ಯುಮ್ನನ ಉನ್ನತ ಗುಣಗ ಳೆದುರು ಆಕೆಯ ನೀಚಸ್ವಭಾವದ ಕುಟಿಲ ಕೃತ್ಯದ ಆಟ ನಡೆಯು ದಾಗುತ್ತದೆ.

ಈ ಕಾವ್ಯದಲ್ಲಿ ಬರುವ ಹಲವಾರು ಉತ್ತಮ ಚಿತ್ರಗಳಲ್ಲಿ ರುಗ್ಮಿಣಿಯು ಅಣ್ಣ ರುಗ್ಮಿಣನ ಮಗಳನ್ನು ಮಗ ಪ್ರದ್ಯುಮ್ನನಿಗೆ ತಂದುಕೊಳ್ಳಬಯಸುವ ಸನ್ನಿವೇಶವೂ ಒಂದಾಗಿದೆ. ಇದರಲ್ಲಿ ಕವಿಗಿರುವ ಆಳವಾದ ಅರಿವೂ, ಅದನ್ನು ಲೇಖನಿಯಲ್ಲಿ ಯಶಸ್ವಿ ಯಾಗಿ ಹಿಡಿದಿರಿಸುವ ಸಾಮರ್ಥ್ಯವೂ ಓದುಗರ ಮನಮುಟ್ಟು ವಂತಿದೆ.

ರುಗ್ಮಿಣಿಯು "ತಣಿದವರ್ ತವರಂ ಮಱೆದರೆಂಬುದು ಪಾಟಿ ಯಾದೊಡಂ ಪ್ರಭುವಿಂಗಪ್ಪ ಪಸುಗೆ ಮೆಯ್ಮಱೆಯಲಾಗೆಂದು ತವರ್ಮನೆಯುಂ ನೆನೆದು" (೯-೫೨೫) ಅಣ್ಣನ ಕೂಸನ್ನು ಬೇಡಿ ಪೆರ್ಗಡೆಗಳನ್ನು ಕಳುಹಿಸುತ್ತಾಳೆ. ಇದರಿಂದ ರುಗ್ಮಿಣನಿಗೆ ಸಂತೋಷವಾಗುವುದಕ್ಕೆ ಬದಲಾಗಿ ದುಃಖವುಮ್ಮಳಿಸಿ ಬರುತ್ತದೆ. ಇದೇ ತಂಗಿ ರುಗ್ಮಿಣಿಯನ್ನು ಮದುವೆಯಾಗು ವಾಗ ತನ್ನ ತಂದೆ ಮತ್ತು ಬಂಧುಬಳಗಗಳನ್ನು ಬಲಿ ತೆಗೆದು ಕೊಂಡ ಕೃಷ್ಣನ ಬಗೆಗೆ ಎಲ್ಲಿಲ್ಲದ ತಿರಸ್ಕಾರ ಮೂಡಿಬರುತ್ತವೆ.

ಆತನು ಹಿಂದಿನದನ್ನು ನೆನೆದು

ಅವರಿವರೆನ್ನದೆ ಮುಳಿದೆ
ಮ್ಮವರೆಲ್ಲರುಮನೊಡನೆ ಮುಸಗಿ ಹರಿಮುಖದೊಳುಂ
ಜಿವುಳಿದುಟಿದೆಡೆಯ ರುಧಿರ
ಪ್ರವಾಹಮೋ ಕುಡಿಯದೆಂತು ಬಂದರೊ ಪೇಟಿಂ ನೀಂ
೯–೫೩

ಎಂಬ ಮಾತುಗಳು ಎಂತಹವರನ್ನೂ ರುಗ್ಮಿಣನ ಪರವಾಗಿ ನಿಲ್ಲುವಂತೆ ಮಾಡುತ್ತವೆ. ಪೆರ್ಗಡೆಗಳ ವಿವಿಧ ರೀತಿಯ ಸಮಾಧಾನಕರ ಮಾತುಗಳಾವುದರಿಂದಲೂ ಆತನ ಮನಸ್ಸು ಸಾಂತ್ವನಗೊಳ್ಳುವುದಿಲ್ಲ. ಆತನು

ಕಲಹದೊಳೆನ್ನ ತಂದೆವೆರಸೆನ್ನವರೆಲ್ಲರುಮಂ ಮುರಾಂತಕಂ
ತಲೆಯರಿದಲ್ಲಿ ನೆತ್ತರಣಮಾಜಿದು ಬರ್ದರ ಮೆಯ್ಯ
ಪುಣ್ಣ ಕೆಂ
ಗಲೆ ಕಿಡದಬ್ಬೆ ಪೆಂಡಿರುಲಿ ಮಗ್ಗದು ಬೆಚ್ಚನೆ ಸುಯ್ದ
ನೋವುಗಳ್
ತೊಲಗಿದುದಿಲ್ಲ ಮತ್ತೆ ಪುಳಿನೆತ್ತರನೇಂ ಕಳೆಯಲ್ಕೆ
ಬೇಟ್ಪನೇ ೯–೫೫

ಎಂದು ಹೇಳುವಲ್ಲಿನ ಒಂದೊಂದು ಮಾತೂ ರುಗ್ಮಿಣನ ಅಸಾಧ್ಯ ಹೃದಯವೇದನೆಗೆ ಸಾಕ್ಷಿಯಾಗಿ ನಿಲ್ಲುತ್ತವೆ. ತಂದೆಯಾದಿಯಾಗಿ ಎಲ್ಲ ಬಂಧುಗಳನ್ನೂ ಬಲಿದೆಗೆದುಕೊಂಡ ಕೃಷ್ಣನು ತನ್ನ ತಂಗಿಯ ಗಂಡನಾದರೂ ಮತ್ತೆ ಆ ಸಂಬಂಧ ಇಲ್ಲಿ ಬರು

ವಂತೆಯೇ ಇಲ್ಲ. ಆ ತನ್ನ ಹಿರಿಯರ ರಕ್ತ ಆರದಿರುವಾಗಲೇ ಬದುಕಿ ಉಳಿದವರ ಮೈಯ್ಯ ಗಾಯಗಳು ಇನ್ನೂ ಮಾಸದಿರುವಾಗಲೇ ಗಂಡಂದಿರನ್ನು ಕಳೆದುಕೊಂಡ ಸತಿಯರ ಅಳಲು ಅಳಿಸದಿರುವಾಗಲೇ ಸಂಬಂಧಿಗಳನ್ನು ಕಳೆದುಕೊಂಡವರ ಬಿಸುಸುಯ್ಲು ಇನ್ನೂ ಮುಗಿಯದಿರುವಾಗಲೇ ಇಂತಹ ಕೇಳಿಕೆ ಬಂದಿರುವುದಕ್ಕೆ ರುಗ್ಮಿಣನ ಮನಸ್ಸಿನ ತಲ್ಲಣ ಅತ್ಯಂತ ರಸವತ್ತಾಗಿ ಧ್ವನಿಪೂರ್ಣವಾಗಿ ಇಡೀ ಚಿತ್ರಣ ಒಂದು ಅದ್ಭುತ ರಮ್ಯ ದೃಶ್ಯವಾಗಿ ಮೂಡಿಬಂದಿದೆ. ಕೊನೆಗೆ ಆತನು

ತಾಂಗಲ್ಕಪ್ಪುದು ಮುನ್ನಮೆನ್ನ ಪಿತೃಗಳ್ ತನ್ನಾಣ್ಮಸಂ
ಸಾಯೆ ಸ
ತ್ತಂ ಗೆಂಟಾಯ್ತೆಂದು ಕೂಸನೆಂತುಮೆಟೆದುಯ್ವಾಗಳ್ಕ
ದಂ ಕೊಲ್ವೆನಾಂ
ಪಾಂಗಾಗೆಂದೊಡೆ ದೀಕ್ಷೆಗೆಯ್ಸವೆನದಕ್ಕಳ್ಕಿರ್ದಪಂ
ತೊನ್ನ ಮಾ
ದೆಂಗಂಗಪ್ಪಡವಿಾವೆನೆನ್ನ ಮಗಳಂ ತನ್ನಾತ್ಮಜಂಗೀವೆನೇ
೯–೫೯

ಎಂಬಲ್ಲಿನ ರುಗ್ಮಿಣನ ಹೃದಯಸಂತಾಪ ಎಂತಹುದೆಂಬುದು ವಿದಿತವಾಗುತ್ತದೆ. ಮಗಳನ್ನು ಮದುವೆಮಾಡಿ, ಆಕೆಯ ಸುಖಸಂತೋಷಗಳನ್ನು ಕಣ್ಣಾರೆ ಕಾಣುವ ಹಂಬಲ ಎಂತಹ ತಂದೆತಾಯಿಗಳಿಗೂ ಮಹತ್ತರವಾಗಿರುತ್ತದೆ. ಅಂತಹ ತಂದೆಯೂ ಕೂಡ ತನ್ನ ಮುದ್ದಿನ ಮಗಳನ್ನು "ದೀಕ್ಷೆಗೆಯ್ಸವೆನದಕ್ಕಳ್ಕಿರ್ದಪಂ ತೊನ್ನ ಮಾದೆಂಗಂಗಪ್ಪಡವಿಾವೆನ್" ಎಂಬ

ಮಾತುಗಳು ಸಹೃದಯರ ಹೃದಯವನ್ನು ಸೆರೆಹಿಡಿಯುತ್ತವೆ. ಈ ಮಾತುಗಳನ್ನು ಕೇಳಿದ ಪ್ರದ್ಯುಮ್ನನು ಮಾದೆಂಗನ ವೇಷದಿಂದಲೇ ಬಂದು ರುಗ್ಮಿಣಕುಮಾರಿ ವಿದರ್ಭೆಯನ್ನು ಕೊಂಡೊಯ್ದ ಮೇಲೆ ಈ ಪ್ರಕರಣ ಕೊನೆಗೊಳ್ಳುತ್ತದೆ. ಕರುಣರಸದಿಂದ ಪ್ರಾರಂಭವಾದ ಈ ಸನ್ನಿವೇಶ ಶಂಕೆ ಆಶಂಕೆಗಳ ಗೊಂದಲಕ್ಕೆ ಸಿಲುಕಿ ತತ್ತರಿಸುತ್ತ ಮುಂದುವರಿದು ಸುಖಾಂತ ವಾಗಿ ಪರಿಣಮಿಸುತ್ತದೆ. ಈ ಮಧ್ಯೆ ಬರುವ ವಿವಿಧ ಪಾತ್ರಗಳ ಮನದ ತೊಳಲಾಟ, ನಾಟಕೀಯತೆ ಬಂಧುವರ್ಮನ ಗುಣ ಮಟ್ಟವನ್ನು ಏರಿಸುತ್ತಾ ಹೋಗುತ್ತದೆ.

ವರ್ಣನೆಯಲ್ಲಿ ಬಂಧುವರ್ಮ ಬಹುಮಟ್ಟಿನ ಸಂಯಮವನ್ನು ತೋರಿಸುತ್ತಾನೆ. ತನಗೆ ಬೇಡವಾದ ಭಾಗಗಳನ್ನು ಬಹು ಸೂಕ್ಷ್ಮವಾಗಿ ನಿರೂಪಿಸಿರುವುದನ್ನು ಕಾಣುತ್ತೇವೆ. ಲಕ್ಷ್ಮಿ ಯೆಂಬ ಒಬ್ಬ ಹೆಣ್ಣುಮಗಳು ಅನೇಕ ಜನ್ಮಗಳನ್ನೆತ್ತಿ ಅಂಬಿ ಗರ ತುಂಬಿಗೆಯಾಗಿ ಜನಿಸುವುದನ್ನು ಐದಾರು ಸಾಲುಗಳ ಗದ್ಯ ದಲ್ಲಿ ಮುಗಿಸಿಬಿಡುತ್ತಾನೆ. ಆತನಿಗೆ ಬೇಕಾಗಿದ್ದುದು ಆಕೆಯು ಭಟಾರರ ಸೇವೆ ಮಾಡಿ ಉನ್ನತ ಸ್ಥಿತಿಗೇರುವುದು. ಆದುದ ರಿಂದಲೇ ಆತ ಕಥಾಸರಣಿಗೆ ಕುಂದುಂಟಾಗದಂತೆ ಉಳಿದ ವಿವರ ಗಳನ್ನು ಸಂಗ್ರಹಿಸಿ ಓದುಗರಿಗೆ ಬೇಸರವುಂಟಾಗದಂತಹ ವರ್ಣನೆಯಲ್ಲಿ ತೊಡಗುತ್ತಾನೆ.

ಸಾಮಾಜಿಕ ವರ್ಣನೆಗಳಲ್ಲಿ ಕವಿಯ ಕರಕುಶಲತೆ ಕಂಗೊಳಿ ಸುವಂತೆ ಪ್ರಕೃತಿವರ್ಣನೆಯಲ್ಲಿ ಕಂಡುಬರುವುದಿಲ್ಲವೆಂದು ಹೇಳಬೇಕಾಗುತ್ತದೆ. ಪ್ರಕೃತಿವರ್ಣನೆಯನ್ನು ಮಾಡುತ್ತಾ "ಮಹೇಶ್ವರಾಲಯದಂತೆ ಗೂರವು ಮನೆಗಳಂತೆ ಕೇರು...." (೨-೩೮) ಮೊದಲಾಗಿ ನೀಡುವ ಮರಗಳ ಹೆಸರ ಪಟ್ಟಿಯನ್ನು

ನೋಡಬಹುದು. ಇಲ್ಲಿಯು ವರ್ಣನೆಯಲ್ಲಿ ಕವಿಯ ಚಮತ್ಕೃತಿ ಕಿಂಚಿತ್ತೂ ಇಲ್ಲವಾಗಿದೆ. ಇಂತಹುದೇ ಮತ್ತೊಂದು ವರ್ಣನೆಯೆಂದರೆ "ಆ ವಿಷಯದ ವನತರುಗಳೆಲ್ಲಂ ವಿದ್ಯಾರ್ಥಿಗಳಂತೆ ಕಲ್ಪತರುಗಳೆ ಕೆಱೆಗಳೆಲ್ಲಂ ದಯಾಧರ್ಮದಱಿಗೆಱೆಗಳೆ ನಂದನ ವನಂಗಳೆಲ್ಲಂ ವಿಷಯಸಂಧಿಯ ಪುಟ್ಟದಂತಾಱಡಿಯುಳ್ಳವೆ" (೧-೧೮ವ) ಎಂಬುದಾಗಿದೆ. ಇದೂ ಕೂಡ ಪ್ರಕೃತಿಯಲ್ಲಿ ಕಂಡ ವಸ್ತುಗಳನ್ನು ಬೇರೆಯವರೊಡನೆ ಹೋಲಿಸುವಷ್ಟರ ಮಟ್ಟಿಗೆ ಸೀಮಿತವಾಗಿದೆ.

ಆದರೆ ಕೆಲವೆಡೆ ಪ್ರಕೃತಿ ವರ್ಣನೆಯಲ್ಲಿಯೂ ಉತ್ತಮವಾದುದನ್ನು ಗುರುತಿಸಬಹುದೆಂಬುದಕ್ಕೆ

ಕೊಳರ್ವಕ್ಕಿಯ ಸೊಗಯಿಪ ಮೆಲ್ಲುಲಿಯಿಂ
ಪೊಳೆದಾಡುವ ಪಸುರ್ತೊಲಗದ ನನೆಯಿಂ
ಪಸುರಿನಿಸಿನಿಸಾಡಿದ ಬಲ್ನನೆಯಿಂ
...........................................................
ಪ್ರಭುಕಂಡನಪೂರ್ವ ಸರೋವರಮಂ ೨-೩೯

ಎಂಬುದನ್ನು ನೋಡಬಹುದು. ಇಲ್ಲಿನ ಸರೋವರದ ವರ್ಣನೆ ಸೊಗಸಾಗಿಯೆ ಮೂಡಿಬಂದಿದೆ. ಹಾಗೆಯೆ

ಮೊರೆಮೊರೆದು ಘೂರ್ಣಿಸುತ್ತಂ
ತೆರೆತೆರೆಗಳನಟ್ಟಿಪೊಯ್ದು ನೆಗೆದೊಗೆದು ಮುಗಿ
ಲ್ವೊರೆವರೆಗಮೆಯ್ದೆ ಮಸಗುವ
ದೊರೆಯಾಯ್ತುತ್ಪಾತ ವಾತಘಾತ ಸಮುದ್ರಂ ೪-೧೪

ಎಂಬ ವರ್ಣನೆಯನ್ನು ನೋಡಿದಾಗ ಸಮುದ್ರವನ್ನು ನೋಡಿ ಆ ರಸಾನುಭೂತಿಯನ್ನು ಪಡೆದ ಯಾರಿಗಾದರೂ ಕವಿಯು ಅದರ ಆನಂದಾನುಭವವನ್ನು ಪಡೆದಿದ್ದಾನೆ ಎಂದೆನಿಸದಿರಲಾರದು. ಅಂತಹ ಸಮುದ್ರದಲ್ಲಿ ಬರುತ್ತಿದ್ದ ಹಡಗು ಒಡೆದುದನ್ನು ವರ್ಣಿಸುವಾಗ ಕವಿಯು ''ಅಂತು ಸಮುದ್ರಂ ಬಹಿತ್ರಂ ಜಿದಱುವಂದು ತಿಟ್ಟನೆ ತಿಱಿದು ಕಲ್ಲೆಯುಂ ಕವಿಯುಮಾಗೆ ನಿರ್ಜೀವನು ಮೆದೆರ್ದುಪೋಗೆ ಕೂವಕಂಭಂ ಮುಱಿಯೆ ಬಂಧಂ ಬಿರಿಯೆ ರಣಂ ಮುಱಿಯೆ ಕೀಲ್ ಕಟಿಲೆ ಬಿಗುಪು ಬಟಿಲೆ....'' (೪–೧೪ವ) ಮೊದಲಾದ ವರ್ಣನೆ ಅದ್ಭುತವಾಗಿದೆ. ರುದ್ರ ಭೀಕರ ಪವನವೇಗಕ್ಕೆ ಸಿಕ್ಕಿದ ಹಡಗಿನ ನಿಜಸ್ಥಿತಿಯನ್ನು ಇದಕ್ಕಿಂತ ಮಿಗಿಲಾಗಿ ವರ್ಣಿಸುವುದು ಸಾಧ್ಯವಿರಬಹುದಾದರೂ ಬಂಧುವರ್ಮನ ಈ ವರ್ಣನೆಯು ಕಳಪೆಯದಾಗಿಲ್ಲ. "ನಿರ್ಜೀವನುಮೆದೆರ್ದುಪೋಗೆ" ಎಂಬ ಧ್ವನಿಪೂರ್ವಕ ಮಾತು ಆ ಸಂದರ್ಭದ ಭೀಕರತೆಯನ್ನು ಸೂಚಿಸುವುದರಲ್ಲಿ ಯಶಸ್ವಿಯಾಗಿದೆ.

ಹೀಗೆ ಸಾಮಾಜಿಕ ಹಾಗೂ ಪ್ರಕೃತಿ ವರ್ಣನೆಗಳಂತೆಯೇ ಸಂಗೀತದಲ್ಲಿಯೂ ಕವಿ ಸ್ವಲ್ಪಮಟ್ಟಿನ ಕೈಚಳಕವನ್ನು ತೋರಿಸ ಹೊರಟದ್ದಾನೆ. ಆದರೆ ಇಲ್ಲೆಲ್ಲಾ ಕವಿ ಅತ್ಯಂತ ಸಾಮಾನ್ಯರಲ್ಲಿ ಸಾಮಾನ್ಯನಾಗಿ ಕಾಣಿಸಿಕೊಳ್ಳುತ್ತಾನೆ. ಇಲ್ಲಿ ಆಯಾ ಶಾಸ್ತ್ರೀಯ ಪದಗಳು ಮಾತ್ರ ಕಾಣಿಸಿಕೊಳ್ಳುವುವೇ ಹೊರತು ಅದರಿಂದ ಆನಂದರಸದ ಯಾವ ಸೂಚನೆಗಳೂ ಗೋಚರಿಸಲಾರವು. ಇದಕ್ಕೆ ''ಕೈಯೊಳಿರ್ದ ವೀಣೆಯಂ ಕೊಂಡು ಮುನ್ನಂ ಸರಸ್ವತಿ ಗ್ರಾಮ ಶ್ರುತಿ...."(೨–೩೧ವ) ಎಂಬ ವರ್ಣನೆಯನ್ನು ನೋಡಬಹುದು.

ಶ್ರುತಿಪವಣಾಗೆ ನುಣ್ಪುವಡೆದಿಂಪೊದವ್ವುತ್ತಿರೆ ತೀವಿ
ನಿಂದಳಂ
ಕೃತ ಕರವೊಪ್ಪೆ ಕೋಮಳಿಕೆ ತಳ್ತಿಸೆದೊಂದಿರೆ
ನಾಡೆಯುಂ ಪ್ರಸ
ನ್ನತೆ ಕರರಾಗಮಾಗೆ ಸಭೆ ಜಿಕ್ಕಸಮಾಗೆ ಮನೋಜಬಾಣ
ಸಂ
ಹತಿಯುವೊಲಾಗೆ ಕನ್ನೆಯನುರುಳ್ಕೆರೆ ಕೊಂಡುದು
ಗೀತನಿಸ್ವನಂ ೨-೩೨

ಎಂಬ ಚಿತ್ರ ಇದ್ದುದರಲ್ಲಿ ಉತ್ತಮ ವರ್ಣನೆಯೆಂದರೂ, ಇದು ಕವಿಯ ಕಲಾಕೌಶಲತೆಗಿಂತ ಹೆಚ್ಚಾಗಿ ಪಾಂಡಿತ್ಯವನ್ನು ಸೂಚಿಸುತ್ತದೆ. ಇಂತಹುದೇ ವರ್ಣನೆಯನ್ನು ಐದನೆಯ ಆಶ್ವಾಸದ ಮೊದಲಲ್ಲಿ ಬರುವ ವಸುದೇವನ ವೀಣಾಬಾಜನೆಯ ಸಂದರ್ಭದಲ್ಲಿಯೂ ಕಾಣಬಹುದು. ಇಲ್ಲೆಲ್ಲಾ ಸಂಗೀತ ಶಾಸ್ತ್ರಾಭ್ಯಾಸಕ್ಕೆ ಸಾಮಗ್ರಿಗಳನ್ನೊದಗಿಸಿಕೊಳ್ಳಬಹುದೇ ಹೊರತು ಅದರಿಂದ ಸಹೃದಯ ಪಡೆಯಬಹುದಾದ ಯಾವ ರಸಾಸ್ವಾದನೆಯೂ ದೊರೆಯಲಾರದು.

ಹಾಗೆಯೇ ನಾಟ್ಯವರ್ಣನೆಯಲ್ಲಿಯೂ ಬಂಧುವರ್ಮ ನೀರಸವಾಗಿ ಗೋಚರಿಸುತ್ತಾನೆ.

ಸದಭಿನುತ ನಾಟ್ಯ ವಿದ್ಯಾ
ಮುದಸ್ತರಪ್ಪವರನಿಂತಡಂಗೊತ್ತುನೆನೆಂ
ಬುದನೊಸೆದಭಿನಯಿಪಂತೊ
ತ್ತಿದ ಬಾಪರವೊಪ್ಪೆ ರಂಗಮಂ ಪುಗುತಂದಳ್ ೭-೩೩

ಎಂಬುದೇ ಇದ್ದುದರಲ್ಲಿ ಉತ್ತಮ ವರ್ಣನೆಯಾಗಿದೆ. ಹೀಗಾಗಿ ಸಂಗೀತ ಮತ್ತು ನಾಟ್ಯವರ್ಣನೆಗಳೆರಡರಲ್ಲಿಯೂ ಬಂಧು ಮರ್ಮನ ಕೈ ಸೋನ್ನೆಯಾಗಿದೆ.

ಸಾಮಾಜಿಕ ಹಾಗೂ ಸಂಗೀತ ನಾಟ್ಯಗಳ ವರ್ಣನೆಯಲ್ಲಿ ಕವಿಗಿರುವ ಶಕ್ತಿಗೆ ಮಧ್ಯಸ್ಥವೆಂಬಂತೆ ಯುದ್ಧವರ್ಣನೆಯಲ್ಲಿ ಕವಿ ತಕ್ಕಮಟ್ಟಿನ ಯಶಸ್ಸನ್ನು ಪಡೆದಿದ್ದಾನೆ. ಇದಕ್ಕೆ ಕೃಷ್ಣನು ಮಾಯಾದೇವತೆಗಳನ್ನು ಮುರಿಯುವ ಸಂದರ್ಭಗಳನ್ನು ನೋಡಬಹುದು. ಕೃಷ್ಣನು ತನ್ನನ್ನು ಕೊಲ್ಲಬಂದವರೆಲ್ಲರನ್ನೂ ಸೋಲಿಸಿ ಓಡಿಸಿದ ಮೇಲೆ ಕೃಷ್ಣನ ಅಟ್ಟಹಾಸವನ್ನು

ಈಗಳವನೀ ಧರಿತ್ರಿಯು
ಮಾಗಸಮುಮನೊಂದನೊಂದು ಕೆಯ್ಯೊಳ್ ಪಿಡಿದಿಂ
ಬಾಗಿರೆ ತಾಳಂ ಬಾರಿಸು
ವಾಗಳ್ ಮಾರ್ಕೊಳ್ವರಿಲ್ಲ ಮೂಱುಂ ಜಗದೊಳ್ ೬–೩೪

ಎಂಬ ವರ್ಣನೆ ಅದ್ಭುತವಾಗಿದೆ. ಕೃಷ್ಣನು ರುಗ್ಮಿಣಿಯನ್ನು ವಶಪಡಿಸಿಕೊಳ್ಳುವ ಸಂದರ್ಭದಲ್ಲಿ ಒದಗಿದ ಯುದ್ಧಭೀಕರತೆಯನ್ನು ಕವಿಯು ನೀಡುವ

ಶಿರುಮಾಯೊಳಂಬನಿಟ್ಟು
ರ್ದಿರದೊಡನೊಡನೆಚ್ಚೊಡೊಗೆದು ಪಾಱುವ ಸರಮುಂ
ಸರಲುಂ ರಣಭರಮುಂ ಭೀ
ಕರಮುಂ ನೋೞ್ಪವರ್ಗೆ ನಾಡೆ ಪಡೆದುದಗುರ್ವಂ

ಬಿಲ್ವಡೆ ಚಲದಿಂದಂ ನೆ
ರ್ಗೊಲ್ವರೆ ಬೆಚ್ಚಗ್ಗಿ ತಗ್ಗಿ ಮಾರ್ಗಾಗಿ ಕರಂ

ಬಲ್ವಾತುಗಿಡದೆ ಸತ್ತು ಪ
ಡಲ್ವಟ್ಟರಿ ರೌದ್ರವಾದುದಾ ರಣರಂಗಂ  ೭-೪೯-೬೦

ಮೊದಲಾದ ವರ್ಣನೆಗಳು ಸಾಮಾನ್ಯವಾದುವಾಗಿ ಕಂಡರೂ ಯುದ್ಧದ ಭೀಕರತೆಯನ್ನು ತೋರಿಸುವುದರಲ್ಲಿ ಯಶಸ್ವಿಯಾಗಿವೆ.

ಅಭಿಮನ್ಯುವು ಚಕ್ರವ್ಯೂಹವನ್ನು ಹೊಕ್ಕು ನಡೆಸಿದ ಹೋರಾಟದ ವರ್ಣನೆಯೂ ಸಾಕಷ್ಟು ಉತ್ತಮವಾಗಿದೆ. ಅಭಿಮನ್ಯುವು ರಥವನ್ನು "ಪರಿಯಿಸಿ ಚಕ್ರವ್ಯೂಹದೊಳಗಂ ಪೊಲಿಗೇರಿಯನಾನೆ ಪೊಕ್ಕಂತೆರಡುಂ ಕೆಲನುಮನಲ್ಲಾಡೆ.... ವೈಶಾಖಮಂಡಳಮೆಂಬ ಸ್ಥಾನಕದೊಳ್ ನಿಂದು" (೧೨-೧೦ವ) ಎರಡು ದೆಸೆಯ ನಾಯಕರನ್ನೂ ಬಗ್ಗು ಬಡಿದು ಮುಂದೆ ನುಗ್ಗಿದುದನ್ನು ಕವಿ

ಶರಸಂಧಾನಕ್ರಿಯೆಯಿಂ
ದೆರಡುಂ ದೆಸೆಗೆಸುತಮಂತೆ ಪರಿಯಿಸಿ ಲೋಗೇ
ಶ್ವರದೊಳಗೆ ಬಂಡಿವರಿವಂ
ತಿರೆ ಚಕ್ರವ್ಯೂಹದೊಳಗೆ ಪರಿದತ್ತು ರಥಂ

ಎಂದು ಬಣ್ಣಿಸುತ್ತಾನೆ. ಮುಂದೆ ಆತನು ದುರ್ಯೋಧನನ ಮಗ ಲಕ್ಕಣನನ್ನು ಕೊಂದುದನ್ನು

ಕೆಡೆವಿನಮಶ್ವಂಗಳ್ ರಥ
ಮುಡಿವಿನಮಾ ರಥಮನೆಸಪನುಂ ಲಕ್ಕಣನುಂ
ಮಡಿವಿನಮರಿಬಲಮುಚ್ಚರಿ
ವಡುವಿನಮೆಚ್ಚಂ ಸುರೇಂದ್ರತನಯನ ತನಯಂ
೧೨-೨೧

ವ॥ಲಕ್ಕಣನನಂತು ಕೊಂದು ವೀರಶ್ರೀಯಂ ತಂದು ಪಗೆವಡೆಯೊಳಿಂ ಗಂಡರಾರೆಂದು ಬಿಲ್ಲನೂಱಿನಿಂದು ಪೊಗೞಿಸುತ್ತಿರ್ಪುದಂ ದುರ್ಯೋಧನಂ ಕಂಡು ಚಕ್ರವ್ಯೂಹದ ಬಲ್ಪಳಿದುದಕ್ಕೆ ಮುನ್ನಂ ಬೆಕ್ಕಸಂಬಟ್ಟು ಬೞಿಯಂ ಮಗನಳಿದುದಕ್ಕುಬ್ಬೆಗಂಬಟ್ಟನಂತು ನೋವಿನ್ಮ್ಮಡಿಸೆ...." (೧೨-೨೧ವ) ಮೊದಲಾದ ವರ್ಣನೆಯಲ್ಲಿ ಕವಿಯು ವರ್ಣನಾಶಕ್ತಿಯನ್ನು ಗುರುತಿಸಬಹುದು.

ಇಂತಹ ವೀರ ಅಭಿಮನ್ಯುವಿಗೆ ಎದುರಾಗಿ ಬಂದ ಸೈಂಧವನನ್ನು

> ಬಂಧನಮಂ ಪಱಿಯುತ್ತೆ ಮ
> ದಾಂದೋದ್ಧತ ರೌದ್ರಭಾವಯುತ ಗಂಧಮಹಾ
> ಸಿಂಧುರಮೆಯ್ತರ್ಪಂತಿರೆ
> ಸೈಂಧವನೆಟ್ಟಿಂದು ತಾಗಿದಂ ನರಸುತನೊಳ್ ೧೨-೨೨

ಎಂಬುದಾಗಿ ಚಿತ್ರಿಸುವಲ್ಲಿ ಸೈಂಧವನ ಆಟಾಟೋಪವನ್ನೂ ಆತನ ಶೌರ್ಯೋನ್ನತಿಯನ್ನೂ ಕಾಣುತ್ತೇವೆ.

ಚಂಪೂಕಾವ್ಯವಾದುದರಿಂದ ಅಷ್ಟಾದಶ ವರ್ಣನೆಗಳನ್ನು ತರಬೇಕೆಂಬ ಬಯಕೆಯಿಂದಲೆಂಬಂತೆ ೧೩-೩೧ ದಂಡಕದಲ್ಲಿ ನರಕವರ್ಣನೆಯನ್ನು ಮಾಡಿ ಮುಗಿಸುತ್ತಾನೆ.

**ಸಾಮಾಜಿಕ ದರ್ಶನ** :

ಬಂಧುವರ್ಮನ ಕಾಲದಲ್ಲಿದ್ದ ವಿವಿಧ ಜಾತಿಗಳ, ಸ್ಪೃಶ್ಯ ಅಸ್ಪೃಶ್ಯರ ದರ್ಶನವನ್ನು ಇಲ್ಲಿ ಕಾಣಬಹುದು. ಹಲವಾರು ಹೆಣ್ಣುಗಳನ್ನು ವರಿಸುವ ವಸುದೇವನು ಮಾದೆಂಗಿತಿಯೊಬ್ಬಳ ರೂಪು ಯೌವನಗಳಿಗೆ ಮನಸೋತು 'ಮುಟ್ಟಲ್ಕಾಗದ ಕುಲ

ದೊಳ್ ಪುಟ್ಟಿಸಿ' (೫-೯) ಎಂದು ಮೊದಲಾಗಿ ಹಲುಬಿ ಆಕೆಯನ್ನು ವರಿಸುವಲ್ಲಿ ತನಗಿರುವ ಅಡಚಣೆಯನ್ನು ಅಭಿವ್ಯಕ್ತ ಗೊಳಿಸುತ್ತಾನೆ. ಆದರೆ ಇದೇ ವಸುದೇವನು ಪರಿಕಾರನಾಗಿ ಕಾಣಿಸಿಕೊಂಡರೂ ಉತ್ತಮ ವರ್ಗದ ರೋಹಿಣಿಯು ಆತನಿಗೆ ಮಾಲೆ ಸೂಡುತ್ತಾಳೆ. ಅದರಿಂದ ಅರಸುಮಕ್ಕಳು ಕುಪಿತರಾಗಿ ಯುದ್ಧಕ್ಕೆ ನಿಲ್ಲುತ್ತಾರೆ. ಅಲ್ಲಿ ನೆರೆದ ಚಕ್ರವರ್ತಿಗಳು ಹಿರಣ್ಯಾಕ್ಷ ನಿಗೆ ಆತನ ಮಗಳು ಮಾಡಿದುದು ತಕ್ಕುದಲ್ಲವೆನ್ನಲು, ಹಿರಣ್ಯಾಕ್ಷನು ತಾನು ಸ್ವಯಂಬರ ಧರ್ಮವನಳಿವೆನಲ್ಲೆಂದು (೫-೧೫ವ) ಹೇಳುವುದು ಸ್ವಯಂಬರದ ಮೂಲಕ ಇಂತಹ ಮದುವೆಗಳು ನಡೆಯಬಹುದಾಗಿದ್ದಿತೆಂಬುದಕ್ಕೆ ಸಾಕ್ಷಿಯಾಗಿವೆ.

ಕಂಸನು ಮಿಾಂಗುಲಿಗನ ಮಗನಾಗಿರುವುದರಿಂದ ತಾನು "ನಿಮ್ಮ ಕೊಳ್ಕೊಡೆಗೆ ತಕ್ಕನಲ್ಲೆಂ ಬೆಸವೆಡೆಗೆ ತಕ್ಕನ್" (೫-೩೧ವ) ಎಂದು ಹೇಳುವ ಮಾತು ಕುಲದ ಬಗೆಗೆ ಅಂದಿನ ಸಮಾಜದಲ್ಲಿದ್ದ ತಾರತಮ್ಯಗಳನ್ನು ಸೂಚಿಸುತ್ತದೆ. ಹಾಗೆಯೆ "ನಾಲ್ಕುಂ ಜಾತಿಯೊಳ್" (೧-೨೨ವ) "ಚಾತುರ್ವರ್ಣಮೆಲ್ಲಂ ನೆರೆದು ಋಷ್ಯಾಂಗಮಂ ಸಂಸ್ಕರಿಸಿ" (೧೦-೩೨ವ), "ಚಾತು ರ್ವರ್ಣ ಶ್ರವಣಸಂಘಮೆಲ್ಲಂ" (೧೩-೪೪ವ), "ಬ್ರಾಹ್ಮಣ ವೇಷಂಗೊಂಡು ಪಾಂಡವರುಂ ಬಂದು....ಋಜುವೀ ಮೂಜುಂ ಜಾತಿಯೊಳಾರಾರಪ್ಪೊಡಂ" (೧೧-೧೪ವ) ಎಂಬ ಮಾತು ಗಳಿಂದ ನಾಲ್ಕು ಜಾತಿಗಳನ್ನು ಸ್ಪಷ್ಟವಾಗಿ ಕಾಣಬಹುದು. ೧೨-೨೫ವ ದಲ್ಲಿ ಬರುವ 'ಪ್ರೊಲೆನೆರವಿ' ಎಂಬುದು ಹೊಲೆಯರ ಜಾತಿಯನ್ನು ಸೂಚಿಸುತ್ತದೆ. ಮಾವೆಗರು, ಹೊಲೆಯರು ಎಂಬ ಮಾತುಗಳು ಹರಿವಂಶಾಭ್ಯುದಯದಲ್ಲಿ ಕಂಡುಬರುತ್ತವೆ.

ಮದುವೆಗೆ ವಧುವನ್ನು ಸಿಂಗರಿಸುವಾಗ ನಾವಿದನು ಕನ್ನೆಯ

ಹುಬ್ಬು ನೊಸಲುಗಳನ್ನು ಸರಿಪಡಿಸುತ್ತಿದ್ದನೆಂಬುದಕ್ಕೆ ಉದಧಿ ಕುಮಾರಿಯ ಮದುವೆಯ ಸಂದರ್ಭದಲ್ಲಿ ನಡೆಯುವ (೯-೭೪) ನಾಪಿತನ ಕರ್ಮ ಸಾಕ್ಷಿಯಾಗಿದೆ.

ವೇಶ್ಯೆಯರೂ ಕೆಲವು ನೀತಿ ನಿಯಮಗಳನ್ನು ಹೊಂದಿದ್ದರೆಂಬುದನ್ನು ಬಂಧುವರ್ಮನಲ್ಲಿ ಕಾಣುತ್ತೇವೆ. ಚಾರುದತ್ತನು ವಸಂತತಿಲಕೆಯನ್ನು ಸೇರಿದ ಮೇಲೆ ಆತನ ತಾಯಿಯು ಕೂಂಟಣಿಯ ವೆಚ್ಚಕ್ಕೆ ನಿತ್ಯವೂ ಹಣವನ್ನು ಕಳುಹಿಸುತ್ತಿದ್ದಳು. ಆ ಹಣವೆಲ್ಲವೂ ತೀರಿದ ಮೇಲೆ ಮಿತ್ರಾವತಿಯು ತನ್ನ ಒಡವೆಗಳನ್ನೇ ಕಳುಹಿಸಿದಳು. ಇದನ್ನು ತಿಳಿದ ಕೂಂಟಣಿಯು "ಸಜ್ಜನವೆಂಡಿರ ತುಡುಗೆಯುಂ ಗಂಡವರ್ಕಳಾಯುಧಮುಂ ಕೊಳ್ವುದು ಪುರುಷಾರ್ಥಮಲ್ಲೆಂದು" (೪-೩೪) ಆ ಒಡವೆಗಳನ್ನು ಹಿಂದಿರುಗಿಸುವ ಕಾರ್ಯ ಜಾರೆಯರ ಬಗೆಗೆ ಎಂತಹ ಜಿಗುಪ್ಸೆಯನ್ನು ಹೊಂದಿದವರೂ ಸಮಾಧಾನಚಿತ್ತರಾಗುತ್ತಾರೆ. ವೃತ್ತಿಯಲ್ಲಿ ಜಾರೆಯರಾದರೂ ನೀತಿಯಲ್ಲಿ ಕೆಲವು ಕಟ್ಟುಪಾಡುಗಳನ್ನು ಹೊಂದಿದವರ ಬಗೆಗೆ ಮೆಚ್ಚುಗೆ ವ್ಯಕ್ತವಾಗುತ್ತದೆ. ಅದೇ ಕೂಂಟಣಿ "ನಿರ್ದ್ರವ್ಯದಳಿಯನನೆಂತುಮಿರಿಸೆನೆಂದು" (೪-೩೪) ಹೇಳುವುದೂ ಆಕೆಯ ನಿಯಮವನ್ನು ಸ್ಪಷ್ಟಪಡಿಸುತ್ತದೆ.

ವೀರಭಟನ ಬಗೆಗೆ ಬಂಧುವರ್ಮನ ಮೆಚ್ಚುಗೆ ಅಪಾರವಾಗಿದೆ. 'ತುಱಿಲಸಂದ'ನೆಂದು ಹೇಳುವ ಕವಿಯು ಈ ಹೆಸರನ್ನು ಪಡೆಯಬೇಕಾದರೆ ಇರಬೇಕಾದ ಲಕ್ಷಣಗಳನ್ನು ಹೇಳುತ್ತಾನೆ. (೧೧-೮೧-೧೦೬ ಮತ್ತು ೧೨-೪೦-೪೨, ೪೫). ಆಜು ಗುಣವಿಲ್ಲದೊಂ ತುಱಿಲಸಂದನಾಗನಿಪ್ಪತ್ತೆಂಟು ಮೂಲಗುಣವಿಲ್ಲದೊಂ ತಪಸ್ವಿಯಾಗನೆಂಬುದು ವೀರಸಿದ್ಧಾಂತಮಂತಪ್ಪ

ಗುಣಂಗಳನುಳ್ಳಾತಂ ಮೇಗಳರಸನಕ್ಕೆ ಕೆಳಗೆ ಪೊಲೆಯನಕ್ಕಾವ ಕುಲಮಾದೊಡಂ ತುಱಿಲಸಂದನೆಂಬೊನಕ್ಕುಮಂತಪ್ಪಾತಂ ಕಿಱುಕುಳನುಂ ಕಡ್ಡನುಮಾಗಲಾಗ ಧೈರ್ಯವಂತನಪ್ಪುದು" (೧೧–೧೦ಳವ) ಎಂದು ಹೇಳುವಲ್ಲಿ ವೀರಭಟನ ಬಗೆಗಿನ ಕವಿಯ ಮನೋಭಾವ ವ್ಯಕ್ತವಾಗುವುದಲ್ಲದೆ ಅಂದಿನ ಸಾಮಾಜಿಕ ನೀತಿಯೂ ತಿಳಿದುಬರುತ್ತದೆ.

ಹಾಗೆಯೆ ಪತಿವ್ರತಾಸ್ತ್ರೀಯರು ಅಸಾಧ್ಯ ಅದ್ಭುತ ಕೆಲಸಗಳನ್ನು ಸಾಧಿಸಬಲ್ಲರೆಂಬುದನ್ನು ಕವಿ ಮನಗಂಡಿದ್ದಾನೆ. ರುಗ್ಮಿಣಿ ಮಹಾದೇವಿಯು ಮುನಿಗಳಿಗೆ ಭಿಕ್ಷೆ ನೀಡಲು ಬಯಸಿದಾಗ "ಇಂದೆ ಬಿತ್ತಿದೊಡಿಂದೆ ಬೆಳೆದ ಕಱಿವೆಯಕ್ಕಿಯಂ ಸುರಭಿಯ ಪಾಲೊಳ್ ತುಯ್ಯಲನಾದಿತ್ಯನ ಕಿರಣದ ಬೆಂಕೆಯೊಳಟ್ಟುದನಲ್ಲದೆ ಉಣ್ಣೆನುಮಲ್ಲಮಂತಿಕ್ಕಲ್ ತೀರ್ವೊಡಿಕ್ಕಿಂ'' ಎಂದು ಹೇಳಿದಾಗ ಆಕೆಯು ಹಾಗೆ ಮಾಡುವಲ್ಲಿ ಕವಿಯು ಧರ್ಮದ ಬಗೆಗಿನ ಯಾವ ವಿಡಂಬನೆಯನ್ನೂ ಮಾಡುವುದಿಲ್ಲ. ಇದಕ್ಕೆ ಒಲವೇ ಮುಖ್ಯ ಕಾರಣವಾಗಿರಬಹುದು. ಇಲ್ಲವೆ ಪತಿವ್ರತಾಸ್ತ್ರೀ ಏನನ್ನು ಬೇಕಾದರೂ ಸಾಧಿಸಬಹುದೆಂಬುದನ್ನು ಸೂಚಿಸಿ, ಅದರಿಂದ ಸ್ತ್ರೀಯರು ಉತ್ತಮ ಗುಣಗಳನ್ನು ಹೊಂದಿದವರಾಗಿರಬೇಕೆಂಬ ಬಯಕೆಯಿಂದ ಹೀಗೆ ನಿರ್ದೇಶಿಸಿರಬಹುದು.

ಸಮಾಜದ ಮುಖ್ಯ ಜೀವಾಳವಾದ ಒಕ್ಕಲುತನದ ಬಗೆಗೂ ಬಂಧುವರ್ಮನ ಕಾವ್ಯಗಳಲ್ಲಿ ಸಾಕಷ್ಟು ವರ್ಣನೆಗಳು ಬಂದಿವೆ. ಇದನ್ನು ಗಮನಿಸಿದಾಗ ಈ ಕವಿಯು ಒಕ್ಕಲುಮನೆತನದಿಂದ ಬಂದವನಿರಬೇಕೆಂದು ಊಹಿಸಬೇಕಾಗುತ್ತದೆ. ಈ ಬಗೆಗೆ ಅಪಾರ ಅನುಭವವನ್ನು ಪಡೆದ ವ್ಯಕ್ತಿತ್ವ ಇಲ್ಲಿ ಸ್ಪಷ್ಟವಾಗುತ್ತದೆ. ಹೊಲ, ಬೆಳೆ–ಇವುಗಳತ್ತ ಅವನ ಮನಸ್ಸು ತುಂಬಾ ಒಲಿದಿದೆ.

ಆದುದರಿಂದಲೇ ಎಲ್ಲಿ ನೋಡಿದಡಲ್ಲಿ ಆ ಬಗೆಗಿನ ವರ್ಣನೆಗಳು, ಉಪಮಾನಗಳು ಕಂಡುಬರುತ್ತವೆ. ಬೆಳಪ ಕೆಯ್ಗಳೊಳ್ ತಲೆ ಗೊಯಿಲು (೧–೧೯), ಪದದೊಳ್ ಬಿತ್ತಿದ ಬೀಜದೊಳ್ ನೊಳೆ (೧೦–೧೧) ಮೊದಲಾದುವು ಹರಿವಂ. ದಲ್ಲಿ ಕಂಡುಬಂದರೆ, ಬಿತ್ತಿಂ ಬೇರುಂ ಮೊಳೆಯುಂ (೧–೩೦), ಫಲಮನಾಸೆವಟ್ಟೊಕ್ಕ ಲಿಗಂ ಪದನಜಿದುಬ್ಬಿ ಬಿತ್ತದೊಡಂ (೧–೫೦ವ) ಎಂಬಿವೇ ಮೊದಲಾದ ಹಲವು ಜೀವಸಂ.ಯಲ್ಲಿ ಕಂಡುಬರುತ್ತವೆ.

ಅಂತೆಯೇ ವೈದ್ಯದ ಕೆಲವು ಉದಾಹರಣೆಗಳನ್ನು ಇಲ್ಲಿ ಕಾಣ ಬಹುದು. ಜೀವಸಂ.ಯಲ್ಲಿನ ಕಾಯ್ದಾಜಿದ ಪಾಲೊಳಂ ಪಿತ್ತಂ ಪೋಕುಂ (೧೦–೧೧ವ) ಪಿತ್ತಪ್ರಕೋಪಂ ಮಧುರ ರಸದೊಳ್ ತೀರ್ವಂತೆ (೧೦–೧೭ವ) ವಮನಕ್ರಿಯೆಯಿಂ ಮೇಗಣ ಶ್ಲೇಷ್ಮದೋಷಮಂ ಸೋದಿಸುವಂತೆ (೧೦–೧೮ವ) ಎಂಬಿವೇ ಮೊದಲಾದುವನ್ನು ಗಮನಿಸಿದಾಗ ಬಂಧುವರ್ಮನು ಅಲ್ಪಸಲ್ಪ ವೈದ್ಯವೃತ್ತಿಯನ್ನು ಮಾಡುತ್ತಿದ್ದಿರಬೇಕು, ಇಲ್ಲವೆ ವೈದ್ಯ ಮನೆತನದವನಾಗಿದ್ದು ಅದರಲ್ಲಿ ಕೆಲವು ವಿಷಯಗಳನ್ನು ತಿಳಿದವನಾಗಿರಬೇಕು ಎಂದೆನ್ನಿಸುತ್ತದೆ.

ಪುರಾಣಕಥೆಗಳ ಬಗೆಗೆ ಬಂಧುವರ್ಮ ವಿಡಂಬನೆ ಮಾಡುತ್ತಾನೆ. ಕೊಂತಿ ಆದಿತ್ಯನನ್ನು ಬಯಸಿ ಗರ್ಭವತಿ ಯಾದುದು, ಕಿವಿಯಲ್ಲಿ ಕರ್ಣ ಹುಟ್ಟಿದನೆಂಬುದೇ ಮೊದಲಾದು ವನ್ನು ಅಲ್ಲಗಳೆಯುತ್ತಾನೆ. ಈ ಕಥೆಗಳನ್ನು ನಂಬುವವರನ್ನು ಕ್ರಿಯಾಶೂನ್ಯರೆಂದು ಹೀಯಾಳಿಸಿದ್ದಾನೆ.

**ಭಾಷೆ, ಶೈಲಿ:**

ಬಂಧುವರ್ಮ ಜನಸಾಮಾನ್ಯರಿಗೆ ಹತ್ತಿರವಾದ ಕವಿ. ತನ್ನ ಎರಡು ಕಾವ್ಯರಚನೆಯನ್ನು ಚಂಪೂಶೈಲಿಯಲ್ಲಿ ರಚಿಸಿ

ದರೂ ಸಂಸ್ಕೃತ ಭೂಯಿಷ್ಠವನ್ನಾಗಿ ಮಾಡದೆ ಸರಳ ಸುಲಭ ರೀತಿಯಲ್ಲಿ ನಿರೂಪಿಸಿದ್ದಾನೆ. ಗ್ರಂಥ ಪ್ರತಿಪಾದ್ಯ ವಿಷಯವು ಜೈನತತ್ತ್ವವಾದರೂ ಧಾರ್ಮಿಕ ಸೋಂಕೇ ಇಲ್ಲದಂತಹ ಪ್ರಕರಣಗಳನ್ನು (ಚಾರುದತ್ತ) ಸಹೃದಯತೆಯಿಂದ ಚಿತ್ರಿಸಿರುವುದು ಕವಿಯ ವಿಶಾಲ ಮನೋಭಾವವನ್ನು ಸೂಚಿಸುತ್ತದೆ.

ಇಂತಹ ಧಾರ್ಮಿಕ ತತ್ತ್ವ ನಿರೂಪಣೆಗೆ ಸಹೃದಯರನ್ನು ಆದಷ್ಟು ಆಕರ್ಷಿಸಬೇಕೆಂಬ ಹಂಬಲದಿಂದ ಹಲವಾರು ಲೌಕಿಕೋಕ್ತಿಗಳನ್ನೂ ಉಪಮೆಗಳನ್ನೂ ಬಳಸಿಕೊಂಡಿದ್ದಾನೆ. ಹರಿವಂ.ದಲ್ಲಿ ಬರುವ

ಅಂತೆಯಾಡುವಂಗೆಱೆಯಪನಾದಂತೆ (೮-೭೯ವ) ಅಂಬುಧಿಯಿಂ ವರುಣಂ ಪೊಱಮಡುವಂತೆ (೧೨-೬೬ವ) ಆನೆಯೊಳೊಡೆಕೊಂಡಮಾಡುವಂತೆ (೬-೪೯) ಉಂತೆ ಕುಣಿವಂಗೆ ಪಱೆವಡೆದಂತೆ (೧೧-೬೬ವ) ಎಳಗೆಯ್ಯ ಮೇಲೆ ಕಾಳ್ಪುರದ ತೊಱೆ ಪರಿದಂತೆ (೧೨-೧೭ವ) ಕಂಪಿಂಗೆ ಸುಳಿವ ತುಂಬಿಯಂತೆ (೯-೬೨ವ) ಕೆಂಗೋಲ್ ಮುಸಗಿದ ಜವನಂತೆ (೯-೨೦ವ) ಚೌವಟದ ಪಣ್ತ ಮರನಂತೆ (೧೦-೨೯) ನಿರ್ಭಾಗ್ಯಂ ಮೆಟ್ಟಿದ ನೆಲನಂ ಸಗಣಿನೀರ್ದಳಿಯಿಂ (೪-೬ವ) ಬಡತನಮಾಗೆ ಬಾಳಿಲಾಱದೆ ಮೇಲೆವಾಯ್ದನೆಂದು (೪-೬ವ) ಸ್ತ್ರೀಸಂಗದಿಂ ತಪಸ್ವಿಯಾದೊಡಮಧೋಗತಿಗಿೞಿದುಮೆಂಬುದನಭಿನಯಿಸುವಂತೆ(೯-೧೧ವ) ಎಂಬಿವೇ ಮೊದಲಾದುವು ಹಾಗೂ ಜೀವಸಂ.ಯಲ್ಲಿ ಬರುವ

ಅನ್ಯರ ಚನ್ನಿಗೆ ಬಳೆಮೊಡಿಸುವಂದ (೪-೨೩) ಊರ್ಗೆವಂದ ಪುಲ್ಲೆಯು ತೆಱದಿಂ (೨-೧೫) ಎಱೆದುಯ್ಯೆ ಗೆಲ್ಲಂ ಸೆಂಡಿನೋಕ್ಕುಂ ಪೆಂಡಿರೊಳಕ್ಕುಮೆ (೧೨-೪೦ವ) ಕಾಕತಾಳ

ನ್ಯಾಯದಿಂ (೧೦-೯೪) ಭಂಡವಿಲ್ಲದಂ ಸುಂಕಕ್ಕಂಜದಂತೆ (೯-೧೮ವ) ಎಂಬಿವುಗಳಲ್ಲಿ ಸಾಮಾನ್ಯೋಪಮೆಗಳಲ್ಲದೆ ಸೂಕ್ತಿಗಳೂ ಲೋಕವಾದಗಳೂ ಗಾದೆಮಾತುಗಳೂ ಸೇರ್ಪಡೆಯಾಗಿ ಕಾವ್ಯದ ಉತ್ತಮ ನಿರೂಪಣೆಗೆ ಸಹಕಾರಿಯಾಗಿ ಪರಿಣಮಿಸಿವೆ.

ಸಾಮಾನ್ಯೋಪಮೆಗಳಲ್ಲದೆ ಮಹೋಪಮೆಯಂತಹವುಗಳನ್ನು ಬಂಧುವರ್ಮನು ತನ್ನ ಕಾವ್ಯಗಳಲ್ಲಿ ಉಪಯೋಗಿಸಿರುವುದನ್ನು ಕಾಣಬಹುದು.

ಬಿದಿವದನವೆಂಬ ಕಮಳಮ
ನುದಧಿಯು ಮೆಯ್ಯೆಂಬ ಕೊಳದೊಳಿಂಬಾಗಿರೆ ಪ
ಣ್ಣಿದ ಸರಲಂ ಮಾಱಿಂಬೊ
ಡ್ಡಿದ ತೆಜದಂತುರ್ಚಿಪೋಯ್ತು ಸಾವಿದನೆರ್ದೆಯಂ
(ಹರಿವಂ ೯-೮)

ಎಂಬಲ್ಲಿ ವಿಧಿಯು ಉದಧಿಯ ಶರೀರವೆಂಬ ಕೊಳದಲ್ಲಿ ವದನವೆಂಬ ಕಮಲವನ್ನು ಅಳವಡಿಸಿದ್ದು, ಅದು ಬಾಣದಂತೆ ನಾವಿದ ರೂಪಿನಲ್ಲಿದ್ದ ಪ್ರದ್ಯುಮ್ನನ ಎದೆಯನ್ನು ಚುಚ್ಚಿತೆಂಬ ಕಲ್ಪನೆ ತುಂಬಾ ಸೊಗಸಾಗಿ ರೂಪುಗೊಂಡಿದೆ. ಇದರಲ್ಲಿ ಸಾಮಾನ್ಯೋಪಮೆಗಿಂತ ಹೆಚ್ಚಾದುದನ್ನು ಎಂದರೆ ಉಪಮೆ ಮಹೋಪಮೆಗಳ ಮಧ್ಯಸ್ಥಿತಿಯನ್ನು ಕಾಣಬಹುದು.

ಹೀಗೆಯೇ ಹದವಾದ ಭೂಮಿಯಲ್ಲಿ ಬಿತ್ತಿದ ಬೀಜದಿಂದ ಉತ್ತಮ ಫಲವನ್ನು ಪಡೆಯುವಂತೆ ಧರ್ಮದಲ್ಲಿ ನೆಲೆಗೊಂಡ ಒಡಲು ದಿವ್ಯಸ್ವರೂಪವೆಂಬ ಫಲವನ್ನು ಪಡೆಯಲು ಸಾಧ್ಯವೆಂಬುದನ್ನು ಸಾದೃಶ್ಯರೂಪದಲ್ಲಿ ಹರಿವಂ. ೧೦-೧೧ರಲ್ಲಿ

ನಿರೂಪಿಸಿರುವುದು ಉಪಮೆಗಿಂತ ಹೆಚ್ಚಿನದೆಂಬುದು ವಿದಿತವಾಗುತ್ತದೆ. ಇದರಂತೆಯೇ ಜೀವಸಂ. ಯು ೮-೧೩, ೯-೧೦, ೧೨-೧೨ವ-ಮೊದಲಾದುವುಗಳಲ್ಲಿಯೂ ಗಮನಿಸಬಹುದು.

ಇವುಗಳ ಜತೆಗೆ ಪ್ರಾರಬ್ಧಸ್ಯಾಂತ ಗಮನಂ ಮಹಾ ಪುರುಷ ಲಕ್ಷಣಂ (ಹರಿವಂ. ೪-೧೨ವ) ನಿಯತಿಃ ಕೇನ ಲಂಘ್ಯತೇ (ಜೀವಸಂ. ೭-೩೧) ಸವಣೋ ಅನೋ ವಯಣೋ (ಜೀವಸಂ. ೭-೫೯ವ) ಕುರುಡಂ ಲಾವುಗೆ ಮೆಟ್ಟಿದಂತೆ (ಅಂಧ ಲಾವುಕ ನ್ಯಾಯ) (ಜೀವಸಂ. ೧-೧೭) ಮೊದಲಾದ ಸಂಸ್ಕೃತ ಪ್ರಾಕೃತ ಗಾದೆಗಳನ್ನೂ ನ್ಯಾಯಗಳನ್ನೂ ಉದಾಹರಿಸಿರುವುದು ಬಂಧುವರ್ಮನ ವಿವಿಧ ಗ್ರಂಥಗಳ ಅಭ್ಯಾಸಕ್ಕೆ ಸಾಕ್ಷಿಯಾಗಿದೆ.

ಈಗಾಗಲೆ ವರ್ಣನಾಭಾಗದಲ್ಲಿ ನೋಡಿರುವಂತೆ ಬಂಧುವರ್ಮನು ತನ್ನ ಕಾವ್ಯಗಳಲ್ಲಿ ಹೇರಳವಾಗಿ ದೇಸಿಯನ್ನು ಬಳಸಿದ್ದಾನೆ. ಇದಕ್ಕೆ ಹರಿವಂ.ದಲ್ಲಿ ವರ್ಣಿತವಾಗಿರುವ ಮಾದೆಂಗಿತಿಯ ಚಿತ್ರವನ್ನು ನೋಡಬಹುದು. ಅನೇಕ ರಸಭಾವಾಭಿನಯಂಗಳಿಂದಾಡುತಿರ್ದ ಮಾದೆಂಗಿತಿಯನ್ನು

ನಿಱಿದಲೆ ಬೆಳರ್ವಾಯ್ ಸುಲಿಪಲ್
ತಱುಗೆಮೊಗಣ್ ಮಿಳಿರ್ವ ಪುರ್ವುಗಳ್ ನಳಿತೋಳ್ಗಳ್
ಕಿಱುಮೊಲೆ ತೆಳ್ವಸಿಱೊಪ್ಪುವ
ಪೊಱವಾಱಳವಟ್ಟ ಜಂಘೆಗಳ್ ಮೆಲ್ಲಡಿಗಳ್ ೫-೭

ಎಂದು ವರ್ಣಿಸುವಲ್ಲಿ

ಕಪ್ಪಡಿಗನಾಗಿ ಬಂದೆಂ
ತಪ್ಪದೆ ಪಱಿಕಾಱನಾಗಿ ನಿಂದೆಂ ರೂಪಿಂ

ದಪ್ಪುದನೆ ಕಂಡಿರಳವಿಗ
ಳಪ್ಪುದನಾ ತೋರ್ಪೆನಳ್ಕದೆನ್ನನೆ ನೋಡಿಂ ೫-೧೭

ಎಂಬ ವಸುದೇವನ ಹೇಳಿಕೆಯಲ್ಲಿ

ಕಲಹದೊಳೆನ್ನ ತಂದೆವೆರಸೆನ್ನವರೆಲ್ಲರುಮಂ ಮುರಾಂತಕಂ
ತಲೆಯರಿದಲ್ಲಿ ನೆತ್ತರಣಮಾಱದು ಬರ್ದರ ಮೆಯ್ಯ
ಪುಣ್ಣ ಕೆಂ
ಗಲೆ ಕಿಡದಟ್ಟಿ ಪೆಂಡಿರುಲಿ ಮಗ್ಗದು ಬೆಚ್ಚನೆ ಸುಯ್ದ
ನೋವುಗಳ್
ತೊಲಗಿದುದಿಲ್ಲ ಮತ್ತೆ ಪುಳಿನೆತ್ತರನೇಂ ಕಳೆಯಲ್ಕೆ
ಬೇಟ್ಪನೇ ೯-೫೫

ಎಂದು ರುಗ್ಮಿಣನು ನೊಂದು ನುಡಿಯುವಲ್ಲಿ ಬಂಧುವರ್ಣನ ದೇಸೀಪದಗಳ ಸೌಂದರ್ಯವನ್ನೂ, ಬಳಸಿರುವ ರೀತಿಯಲ್ಲಿ ಸಂದರ್ಭಕ್ಕೆ ತಕ್ಕ ಮಾಧುರ್ಯವನ್ನೂ ಮನಗಾಣಬಹುದು.

ಇಂತಹವನ್ನು ಜೀವಸಂಬೋಧನೆಯಲ್ಲಿಯೂ ಕಾಣಬಹುದು.

ಸೇಸೆಯನಿಕ್ಕಿದೊಡಲ್ಲಿಯ
ಸಾಸಿವೆಯೆತ್ತಾನುಮೊಂದು ಬಂದವನೊಸೆದಿ
ರ್ದಾಸನದೊಳಿರ್ದುವೊತ್ತೆ ಚ
ಳಾಸನನಾಗಿರ್ದ ಪಾಂಗಿದಲ್ತೆ ನರೇಂದ್ರಾ ೬-೪೦

ಎಂಬ ಸುಕುಮಾರನು ಚಲನವಲನಕ್ಕೆ ಕಾರಣವನ್ನು ಸೂಚಿಸುವಲ್ಲಿ

ಸಿಡಿಲುಂ ಮಿಂಚುಂ ನೊರೆಗುಂ
ಕಡುಗಾಳಿಯುಮೊದವಿದೈಕಿಲುಂ ಬೆರಸಿ ತಗು
ಳ್ದಿಡೆವಿಡದೆ ಪೊಯ್ವವೋಲಂ
ತಡಸಿ ಕರಂ ಕೊಳ್ವ ಮುೞೆಯುನೇನಂ ಬಗೆಯುಂ

೧೦–೪೦

ಎಂಬ ತಪಸ್ವಿಯು ಸಿಡಿಲು ಮಿಂಚುಗಳನ್ನು ಎದುರಿಸುವ ಸನ್ನಿವೇಶ ವರ್ಣನೆಯಲ್ಲಿ ಹೇರಳವಾದ ದೇಸೀಪದಗಳನ್ನು ಕಾಣಬಹುದು. ಹೀಗೆಯೇ ಗದ್ಯಭಾಗಗಳಲ್ಲಿಯೂ ಬಂಧುವರ್ಮನ ಹೆಚ್ಚಳವನ್ನು ಗುರುತಿಸಬಹುದು.

ಮತ್ತೊಂದು ಕೃತಿಯಾದ ಸತಿಧರ್ಮಸಾರ ಕೃತಿಯಲ್ಲಿಯೂ ಸರಳ ಸುಲಭ ರೀತಿಯ ವರ್ಣನಾರೀತಿಯನ್ನೂ, ಬಳಸಿರುವ ಎಡವಲಿ, ಕಾವಲಿ, ಕೈವಟ್ಟಲು ಬೆಸಳಿಗೆ—ಮೊದಲಾದ ದೇಸೀಪದಗಳನ್ನೂ ಗಮನಿಸಬಹುದು.

ಒಟ್ಟಿನಲ್ಲಿ ಬಂಧುವರ್ಮ ಉತ್ತಮಕವಿ. ಮಹಾಕವಿಯ ಮಟ್ಟಕ್ಕೆ ಮುಟ್ಟದಿದ್ದರೂ ಸಾಮಾನ್ಯ ಕವಿಗಿಂತ ಮೇಲ್ಮಟ್ಟದಲ್ಲಿರುವುದನ್ನು ಕಾಣಬಹುದು.

ಅವನ ಕಾವ್ಯಗಳಲ್ಲಿ ಸಾಮಾನ್ಯ ಜನತೆಯನ್ನು ಆಕರ್ಷಿಸುವ ಶಕ್ತಿಯಿದೆ. ಮನುಷ್ಯರು ಆದರ್ಶರಾಗಿ ಬಾಳಬೇಕೆಂದು ಬಯಸುವ ಆತನು ಆದರತ್ತ ಒಲಿಯುವ ಉಪದೇಶಾವಳಿಗಳನ್ನೇ ತನ್ನ ಕಾವ್ಯದಲ್ಲಿ ಅಳವಡಿಸಿದ್ದಾನೆ. ಯಾವುದೇ ಸಂಪತ್ತು, ಅಧಿಕಾರ—ಯಾವುದಿದ್ದರೂ ಆದರ್ಶ ನೀತಿಗಳನ್ನು ಪಾಲಿಸದವನು ಅಧೋಗತಿಗಿಳಿಯುತ್ತಾನೆಂಬುದನ್ನು ವಿವಿಧ ಪಾತ್ರಗಳ ಮೂಲಕ ಶ್ರುತಪಡಿಸುತ್ತಾನೆ.

# ಅರ್ಥಸೂಚಿ

ಅಡಂಗೊತ್ತು–ಅಡಗಿಹೋಗುವಂತೆ ಆದುವು
ಅಬ್ಬೆ–ತಾಯಿ
ಉಡುಪಾನನೆ–ಚಂದ್ರಮುಖಿ
ಉಮ್ಮಳಿಸು–ದುಃಖಿಸು
ಏಳಿದಿಕೆ–ತಿರಸ್ಕಾರ, ಹೀನಾವಸ್ಥೆ
ಕಪ್ಪಡಿಗ–ಕರ್ಪಟಿಕ, ಹರುಕುಬಟ್ಟೆಗಳನ್ನು ಧರಿಸಿದವನು
ಕೆಮ್ಮನೆ–ಅಕಾರಣವಾಗಿ
ಕೇರ್–ಗೋಡೆ
ಕೇಲ–ಮಣ್ಣಿನಿಂದ ಮಾಡಿದ ಗಡಿಗೆ
ಕೊಟಿಚಾಟ–ಅಣಕ
ಗಟ–ಬಿದಿರಬಂಬು
ಜಿವುಳಿದುಟಿ–ಚಿಗುಳಿಯನ್ನು ತುಳಿದಂತೆ ತುಳಿ
ತಿರುವಾಯ್–ಬಿಲ್ಲಿನ ಹೆದೆ
ತುಱುಂಬು–ಮುಡಿದುಕೊಳ್ಳು
ತ್ರಸ–ಚಲಿಸುವ ಜೀವ
ನೇಣ್–ಹಗ್ಗ
ನೇಸಱ್–ಸೂರ್ಯ
ಪಡಲ್ವಡು–ಚೆಲ್ಲಾಪಿಲ್ಲಿಯಾಗು
ಪಡುಕೆ–ಕೆಟ್ಟವಾಸನೆ
ಪವಣ್–ಪ್ರಮಾಣ
ಪಾಂಗು–ರೀತಿ
ಪೂಣ್–ಪ್ರತಿಜ್ಞೆ
ಬೀವು–ಒಂದು ವಿಧ ಮಡಕೆ
ಬೆಕ್ಕಸ–ಆಶ್ಚರ್ಯ
ಬೆಮ್ಮರ–ಬೆನ್ನಮರ, ತೊಲೆ, ಸರ

ಮರವಾಳ್–ಮರದಿಂದ ಮಾಡಿದ ಕತ್ತಿ
ಮಿಳಿರ್–ಚಲಿಸು
ಮುಳಿಸು–ಕೋಪ
ಮೆಟ್ಪಡು-ಮೋಸಹೋಗು
ರಯ್ಯ–ರಮ್ಯ, ಸೊಗಸು
ಲೋಗೇಶ್ವರ-ಲೋಯಿಸರ (?)
ಸಂಕ್ಲೇಶ–ತೊಂದರೆ
ಸಂತ್ರಾಸಕರ–ಭಯವನ್ನುಂಟುಮಾಡುವ
ಸಿಂದುರ–ಆನೆ
ಸುರಿಗೆ–ಕಠಾರಿ
ಸೆರೆ–ನರ

## ಗ್ರಂಥಗಳು :

1. ಹರಿವಂಶಾಭ್ಯುದಯಂ—ಬಂಧುವರ್ಮ
ಸಂ.ಬಿ. ಎಸ್.ಸಣ್ಣಯ್ಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1974

2. ಜೀವಸಂಬೋಧನಂ—ಬಂಧುವರ್ಮ
ಸಂ. ಎಚ್. ಶೇಷಯ್ಯಂಗಾರ್, ಸರ್ಕಾರೀ ಪ್ರಾಚ್ಯಕೋಶಾಗಾರ ಮದರಾಸು ವಿಶ್ವವಿದ್ಯಾನಿಲಯ, ಮದರಾಸು, 1955

3. ಸತಿಧರ್ಮಸಾರ—ಬಂಧುವರ್ಮ
ಸಂ. ಬಿ. ಎಸ್. ಸಣ್ಣಯ್ಯ, ರವಿಪ್ರಕಾಶನ, 33/1, 8ನೆಯ ಅಡ್ಡರಸ್ತೆ, ಜಯಲಕ್ಷ್ಮೀಪುರಂ, ಮೈಸೂರು, 1976

# ಕೆಲವು ಸಾಹಿತ್ಯ ಕೃತಿಗಳು

## ಬೆಲೆ: ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦ ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ॥ ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ॥ ಹಿರಣ್ಮಯ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ॥ ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ॥ ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣ ಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ॥ ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ॥ ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ॥ ಹಿರಣ್ಮಯಿ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ॥ ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ